# ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ

## (ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ)

ಎನ್.ಕೆ. ಮಂಜುಳ

ಸಂಶೋಧನ ವಿದ್ಯಾರ್ಥಿ

ಕೆ.ವಿ. ನಾರಾಯಣ

ಮಾರ್ಗದರ್ಶಕರು






ಡ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಸಂಶೋಧನ ಪ್ರಬಂಧ

ಜನವರಿ ೨೦೦೮

# ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ

## (ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ)

ಎನ್.ಕೆ. ಮಂಜುಳ

ಸಂಶೋಧನ ವಿದ್ಯಾರ್ಥಿ

ಕೆ.ವಿ. ನಾರಾಯಣ

ಮಾರ್ಗದರ್ಶಕರು





ಕನ್ನಡ ವಿಶ್ವವಿದ್ಯಾಲಯದ ಪಿಎಚ್.ಡಿ ಪದವಿಗಾಗಿ ಸಲ್ಲಿಸಿದ ಸಂಶೋಧನ ಪ್ರಬಂಧ

ಜನವರಿ ೨೦೦೯

# ದೃಢೀಕರಣ ಪತ್ರ

'ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ (ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ)' ಎಂಬ ವಿಷಯವನ್ನು ಕುರಿತ ಈ ಸಂಶೋಧನ ಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಎನ್.ಕೆ. ಮಂಜುಳ ಅವರು ಸಿದ್ಧಪಡಿಸಿದ್ದಾರೆ. ಈ ಸಂಶೋಧನೆ ಮತ್ತು ಅದನ್ನು ಕುರಿತ ಬರವಣಿಗೆಯು ಎನ್.ಕೆ. ಮಂಜುಳ ಅವರ ಪರಿಶ್ರಮದ ಫಲಿತ ಎಂದು ಈ ಮೂಲಕ ದೃಢೀಕರಿಸುತ್ತೇನೆ.

ಭಾರತೀಯ ಭಾಷಾ ಸಂಸ್ಥಾನ
ಮೈಸೂರು
ದಿನಾಂಕ: ೧೯/೧/೦೫

ಡಾ. ಕೆ.ವಿ. ನಾರಾಯಣ
ಮಾರ್ಗದರ್ಶಕರು



# ಸಮರ್ಥನಾ ಪತ್ರ

'ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ (ಕನ್ನಡ ಮಾತೃಭಾಷೆಯ ಮಕ್ಕಳನ್ನು ಅನುಲಕ್ಷಿಸಿ)' ಎನ್ನುವ ಈ ಸಂಶೋಧನ ನಿಬಂಧವನ್ನು ನಾನು ಕನ್ನಡ ವಿಶ್ವವಿದ್ಯಾಲಯದ ಪಿ.ಎಚ್‌ಡಿ. ಪದವಿಗಾಗಿ ಡಾ. ಕೆ.ವಿ. ನಾರಾಯಣ, ವಿಶ್ರಾಂತ ಪ್ರಾಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಇಲ್ಲಿ ಬರೆಹ ಮತ್ತು ಫಲಿತಗಳು ನನ್ನ ಸಂಶೋಧನೆಗೆ ಸೇರಿರುತ್ತವೆಯೆಂದು ಮತ್ತು ಈವರೆಗೆ ಇದನ್ನು ಎಲ್ಲಿಯೂ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

Manjula NK
ಎನ್.ಕೆ. ಮಂಜುಳ
ಸಂಶೋಧನ ವಿದ್ಯಾರ್ಥಿನಿ

ಕನ್ನಡ ಭಾಷಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ
ದಿನಾಂಕ: 19/[illegible]/2009

ಪರಿವಿಡಿ

ಅಧ್ಯಾಯ-೧

# ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ವಿಧಾನ

ಭಾಷೆಯು ಒಂದು ಅಂತಸ್ಥ ಸಾಮರ್ಥ್ಯ. ಅದು ಬಳಕೆಯಾಗದಿದ್ದರೂ ಸುಪ್ತವಾಗಿ ವ್ಯಕ್ತಿಯಲ್ಲಿರುತ್ತದೆ. ಆದರೆ ಭಾಷಾ ಅಂತಸ್ಥ ಸಾಮರ್ಥ್ಯಕ್ಕೂ ಮತ್ತು ಅದು ಪ್ರಕಟಗೊಳ್ಳುವ ರೀತಿಗೂ ವ್ಯತ್ಯಾಸವಿದೆ. ಪ್ರಕಟಗೊಳ್ಳುವ ರೀತಿಯಲ್ಲಿ ವ್ಯತ್ಯಾಸವಿರಲು ಅನೇಕ ಕಾರಣಗಳಿವೆ. ಉದಾ: ಪ್ರಕಟಗೊಳ್ಳಲು ಸಹಾಯಕವಾಗುವ ಜೈವಿಕ ಅಂಗಗಳ ನ್ಯೂನತೆ ಒಂದಾದರೆ ಪ್ರಕಟಗೊಳಿಸುವವರ ಸಮಯ,ಸಂದರ್ಭಗಳಿಗೆ ಅನುಸಾರವಾಗಿ ವ್ಯತ್ಯಾಸಗೊಳ್ಳುವ ಮನಃಸ್ಥಿತಿ. ಭಾಷಿಕ ಅಂತಸ್ಥ ಸಾಮರ್ಥ್ಯ ಮಾತ್ರ ಎಲ್ಲರಲ್ಲಿಯೂ ಒಂದೇ ರೀತಿಯಾಗಿರುತ್ತದೆ. ಈ ಎರಡರ ನಡುವಿನ ಪ್ರಕ್ರಿಯೆ ಸಮಾನಾಂತರವಾಗಿ ನಡೆಯುತ್ತಿರುತ್ತದೆ. ಆದರೆ ಪ್ರಮಾಣದಲ್ಲಿ ಸಮಾನವಾಗಿರುತ್ತದೆ ಎಂದು ಹೇಳಲಾಗದು. ಮಾನವ (ಮನುಷ್ಯನ ನೈಸರ್ಗಿಕತೆ) ಹಾಗೂ ಪೂರಕ ಪರಿಸರ ಮತ್ತು ಇದಕ್ಕೆ ಅನುಗುಣವಾದ ಸಂದರ್ಭ, ಕಾರಣಗಳು ಒಟ್ಟಿಗೆ ಸೇರಿದಾಗ ಬೆಳವಣಿಗೆ ಆಗುತ್ತದೆ. ಇದು ಸಹಜವಾದ ಪ್ರಕ್ರಿಯೆಯಾಗಿದೆ. ಇಷ್ಟು ಸಹಜ ಮತ್ತು ವಿಸ್ಮಯವಾದ ಭಾಷೆಯ ಬೆಳವಣಿಗೆಯು ಮಕ್ಕಳಲ್ಲಿ ಘಟಿಸುವ ಕ್ರಮವನ್ನು ಅರಿಯುವುದು ಕುತೂಹಲಕರವಾದ ಸಂಗತಿಯಾಗಿದೆ.

ಮಕ್ಕಳ ಭಾಷೆಯ ಬಗ್ಗೆ ಅಧ್ಯಯನಗಳು ಆರಂಭವಾದದ್ದು ೨೦ನೆಯ ಶತಮಾನದಲ್ಲಿ. ಇವುಗಳು ಮಗುವಿನ ಭಾಷಾ 'ಕಲಿಕೆ' ಯ ಸ್ವರೂಪವನ್ನು ತಿಳಿಯುವ ಅಧ್ಯಯನಗಳಾಗಿದ್ದವು. ಅಮೆರಿಕಾದ ಮನೋವಿಜ್ಞಾನಿ ರೋಜರ್ ಬ್ರೌನ್ ೧೯೬೦ ರಲ್ಲಿ ಕೇವಲ ಮೂರು ಮಕ್ಕಳನ್ನು ಆಯ್ದು ಅಧ್ಯಯನ ನಡೆಸಿದ್ದಾನೆ. ೧೯೭೦ ರಲ್ಲಿ ಬ್ರಿಟನ್ನಿನ ಮನೋಭಾಷಾಶಾಸ್ತ್ರಜ್ಞ ಗೋರ್ಡನ್ ವೆಲ್ಸ್ ಮುಂತಾದವರನ್ನು ಉಲ್ಲೇಖಿಸಬಹುದು.

ಡಾ. ಎಲ್. ದೇವಕಿಯವರು ಡಾ.ಎ.ಕೆ. ಶ್ರೀವಾತ್ಸವ ಅವರ ಮಾರ್ಗದರ್ಶನದಲ್ಲಿ 'ಡೆವಲಪ್‌ಮೆಂಟ್ ಆಫ್ ಮಾರ್ಫೋಲಜಿಕಲ್ ರೂಲ್ಸ್ ಇನ್ ಚಿಲ್ಡ್ರೆನ್' ಎಂಬ ವಿಷಯದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಅವರು ಈ ಮಹಾಪ್ರಬಂಧವನ್ನು 'ಸಿ.ಐ.ಐ.ಎಲ್, ಮಾನಸಗಂಗೋತ್ರಿ, ಮೈಸೂರು' ಇಲ್ಲಿಗೆ ಸಲ್ಲಿಸಿದ್ದಾರೆ. ಇದಕ್ಕೆ ಬೇಕಾದ ದತ್ತಾಂಶದ ವಿಶ್ಲೇಷಣೆ ಮಾಡುವಾಗ ಮಕ್ಕಳ ವಯಸ್ಸು, ಲಿಂಗ, ಸಮಾಜೋ ಆರ್ಥಿಕ ವರ್ಗಗಳನ್ನು ಗಣನೆಗೆ ತೆಗೆದುಕೊಂಡಿದ್ದಾರೆ. ಮೂರರಿಂದ ಏಳು ವರ್ಷಗಳ ಮಕ್ಕಳ ವಯೋಮಿತಿಯ ತಮಿಳು ಮತ್ತು ಕನ್ನಡ ಮಾತೃಭಾಷೆಯುಳ್ಳ ಮಕ್ಕಳನ್ನು ಆಯ್ಕೆ ಮಾಡಿಕೊಂಡು ಅಧ್ಯಯನ ಮಾಡಿದ್ದಾರೆ.

ಎಂ.ವಿ. ಗಿರಿಜಮ್ಮ ಇವರು ಡಾ. ಸಿ.ಎಸ್.ರಾಮಚಂದ್ರ ಇವರ ಮಾರ್ಗದರ್ಶನದಲ್ಲಿ "ಮಕ್ಕಳಲ್ಲಿ ಕನ್ನಡ ಭಾಷಾ ಕಲಿಕೆ" ಎಂಬ ವಿಷಯದ ಬಗ್ಗೆ ಅಧ್ಯಯನ ಮಾಡಿದ್ದಾರೆ. ಈ ಮಹಾಪ್ರಬಂಧವನ್ನು ಭಾಷಾವಿಜ್ಞಾನ ಅಧ್ಯಯನ ವಿಭಾಗ, ಮೈಸೂರು ವಿಶ್ವವಿದ್ಯಾಲಯ ಇಲ್ಲಿಗೆ ೨೦೦೬ ರಲ್ಲಿ ಸಲ್ಲಿಸಿದ್ದಾರೆ. ಒಂಬತ್ತು ತಿಂಗಳಿನಿಂದ ನಾಲ್ಕೂವರೆ ವರ್ಷದ ಮಕ್ಕಳ ಧ್ವನಿ, ಪದ, ಪದಪುಂಜ ಹಾಗೂ ವಾಕ್ಯಗಳ ಕಲಿಕೆ ಮತ್ತು ಬೆಳವಣಿಗೆಯನ್ನು ವಿವರಣಾತ್ಮಕವಾಗಿ ಅಧ್ಯಯನ ಮಾಡಿದ್ದಾರೆ. ಜೊತೆಗೆ ಕಲಿಕೆಯ ಸಂದರ್ಭದಲ್ಲಿ ಮಗುವಿನ ಮೇಲಾಗುವ ಪರಿಸರದ ಹಾಗೂ ಭಾಷಿಕೇತರ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅಧ್ಯಯನ ಮಾಡಿದ್ದಾರೆ.

ಮಕ್ಕಳ ಭಾಷಾ ಕಲಿಕೆ ವಯಸ್ಕರ ಭಾಷಾ ಕಲಿಕೆಗಿಂತ ಭಿನ್ನವಾಗಿರುವುದರಿಂದಲೇ ಅದನ್ನು (ಲ್ಯಾಂಗ್ವೇಜ್ ಅಕ್ವಿಸಿಷನ್) 'ಭಾಷಾ ಗಳಿಕೆ' ಎನ್ನಲಾಗಿದೆ. ಇದು ಭಾಷಾಸಾಮರ್ಥ್ಯವು ಪಡೆಯುವ ಮತ್ತು ಬೆಳೆಯುವ ಕ್ರಮ ಕಲಿಕೆ ನಿಯಮ ಸಂದರ್ಭದಲ್ಲಿ, ಪೂರ್ಣ ಪ್ರಮಾಣದ ಮಾದರಿ ರೂಪದಲ್ಲಿದ್ದಾಗ ಮಾತ್ರ ಅದು ಸಾಧ್ಯವಾಗುತ್ತದೆ. ಆದರೆ

ಮಗು ಪಡೆದುಕೊಳ್ಳುವ ಭಾಷೆಗೆ ಪರಿಸರದ ಭಾಷೆ ಪೂರ್ಣ ಪ್ರಮಾಣದ ಭಾಷೆಯನ್ನು ಒದಗಿಸುವುದಿಲ್ಲ. ಅದು ಪೂರ್ಣವಾಗಿರದೆ ತುಂಡುತುಂಡಾಗಿರುತ್ತದೆ. ಇಲ್ಲಿ ಪರಿಸರ ಪೂರಕವಾಗಿ ಕೆಲಸ ಮಾಡುತ್ತದೆ ಅಷ್ಟೆ. ಈ ನಿಟ್ಟಿನಲ್ಲಿ ಅಧ್ಯಯನಗಳು ಕನ್ನಡದಲ್ಲಿ ಆಗದೆ ಇರುವುದರಿಂದ ಇದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಅಂತಸ್ಥ ತಿಳುವಳಿಕೆಯು ಮಾತಾಗಿ ಪರಿವರ್ತಿತವಾಗುವುದು ಎರಡು ನೆಲೆಯಲ್ಲಿ. ಒಂದು ಗ್ರಹಿಕೆಯ ನೆಲೆ, ಇನ್ನೊಂದು ಅಭಿವ್ಯಕ್ತಿಯ ನೆಲೆ. ಮನುಷ್ಯ ಮತ್ತು ಪರಿಸರದ ನಡುವಿನ ಸಂಬಂಧ, ಸಂದರ್ಭ ಹಾಗೂ ಕಾರಣಗಳು ಇವು ಎರಡು ಬೇರೆ ಬೇರೆ. ಒಟ್ಟಿಗೆ ಸೇರಿದಾಗ ಬೆಳವಣಿಗೆಯಾಗುತ್ತದೆ. ಕೆಲವು ಸಂದರ್ಭದಲ್ಲಿ ಪರಿಣಾಮದಿಂದಾಗಿ ಕಾರಣಗಳನ್ನು ತಿಳಿದುಕೊಳ್ಳುತ್ತೇವೆ. ಭಾಷೆ ಕೂಡ ಈ ಬಗೆಯ ಒಂದು ವಿಧಾನ. ಭಾಷಾ ಅಂತಸ್ಥ ತಿಳುವಳಿಕೆಯು ವಯೋಮಾನಕ್ಕೆ ಅನುಗುಣವಾಗಿ ಅಭಿವ್ಯಕ್ತಗೊಳ್ಳುತ್ತದೆ. ಮಕ್ಕಳು ಗ್ರಹಿಸಿದ ಭಾಷಿಕ ಸಾಮರ್ಥ್ಯವನ್ನು ಅಭಿವ್ಯಕ್ತಿಗೊಳಿಸಿದಾಗ ಅಂತಸ್ಥ ತಿಳುವಳಿಕೆಯ ಮೂರ್ತರೂಪ ಗೋಚರವಾಗುತ್ತದೆ.

ಯಾವುದೇ ಭಾಷೆಯ ದೇಶೀಯ ಮಾತುಗಾರರು ಆ ಭಾಷೆಗೆ ಸಂಬಂಧಪಟ್ಟಂತೆ ವ್ಯಾಕರಣಬದ್ಧವಾಗಿಯೇ ಮಾತನಾಡುತ್ತಾರೆ. ಆ ಮಾತುಗಳ ರಚನೆ ಮತ್ತು ನಿಯಮಗಳ ಬಗ್ಗೆ ಕೇಳಿದರೆ ವಿವರಿಸಲು ಸಾಧ್ಯವಾಗದಿದ್ದರೂ ಅವರಲ್ಲಿ ಸಹಜವಾದ ಸುಪ್ತವಾಗಿರುವ ಆ ಭಾಷೆಯ ಸಾಮರ್ಥ್ಯವಿರುತ್ತದ ಮಕ್ಕಳು ಕೇವಲ ಒಂದು ಪದ ಮತ್ತು ಎರಡು ಪದಗಳನ್ನು ಉಚ್ಚರಿಸಿದರೂ ಅವು ಇಡಿಯಾದ ವಾಕ್ಯವನ್ನು ಪ್ರತಿನಿಧಿಸುತ್ತಿರುತ್ತವೆ. ವಾಕ್ಯದ ಅಂತಸ್ಥ ರೂಪ ಮಗುವಿಗೆ ತಿಳಿದಿರುತ್ತದೆ. ಅಂತಸ್ಥ ತಿಳುವಳಿಕೆಯನ್ನು ಮಕ್ಕಳು ವಯೋಮಾನಕ್ಕೆ ಅನುಸಾರವಾಗಿ ಹೇಗೆ ಅಭಿವ್ಯಕ್ತಗೊಳ್ಳಿಸುತ್ತಾರೆ ಎಂಬುದನ್ನು ಪ್ರಸ್ತುತ ಅಧ್ಯಯನದಲ್ಲಿ ವಾಕ್ಯರಚನೆಯ ನಿಯಮಗಳ ಮೂಲಕ ಮಂಡಿಸಲಾಗುತ್ತದೆ.

ಮಕ್ಕಳಲ್ಲಿ ನಿಯಮಗಳು ಯಾವಾಗ ಮತ್ತು ಯಾವ ಕ್ರಮದಲ್ಲಿ ಘಟಿಸುತ್ತವೆ; ಸರ್ವನಾಮ, ನಾಮಪದ, ಕ್ರಿಯಾಪದ, ವಿಶೇಷಣಗಳು ಬರುವ ಅನುಕ್ರಮಣಿಕೆಯನ್ನು ಮತ್ತು ನಾಮಪದ, ಕ್ರಿಯಾಪದ ಗುಚ್ಚಗಳು ಹಾಗೂ ನಕಾರಾತ್ಮಕ ಪ್ರಶ್ನಾರ್ಥಕ ವಾಕ್ಯಗಳು ಮಕ್ಕಳಲ್ಲಿ ಅಭಿವ್ಯಕ್ತಗೊಳ್ಳುವ ವಯೋಮಾನ ಯಾವುದು; ಇವುಗಳಲ್ಲಿ ಅನುಕ್ರಮವಿದೆಯೇ ಎಂಬುದನ್ನು ಕಂಡುಕೊಳ್ಳುವುದು ಅಧ್ಯಯನದ ಸಮಸ್ಯೆಯಾಗಿದೆ ಮತ್ತು ಇದು ಅಧ್ಯಯನದ ಉದ್ದೇಶಗಳಲ್ಲಿ ಒಂದಾಗಿದೆ.

ಪ್ರಸ್ತುತ ಅಧ್ಯಯನವು ಮಕ್ಕಳಲ್ಲಿ ವಾಕ್ಯರಚನೆಯ ನಿಯಮಗಳ ಬೆಳವಣಿಗೆಗೆ ಸಂಬಂಧಿಸಿದ್ದಾಗಿದೆ. ಈ ವಿಷಯವು ಮನೋಭಾಷಾಶಾಸ್ತ್ರದ ಅಧ್ಯಯನಕ್ಕೆ ಸೇರಿದ ಚಿಕ್ಕ ಘಟಕವಾಗಿದೆ. ಭಾಷಾ ಗಳಿಕೆಯ ಈ ಆಯಾಮಗಳು ಮೇಲ್ನೋಟಕ್ಕೆ ಸಹಜವೆನಿಸಿದರೂ ಆಂತರಿಕವಾಗಿ ತುಂಬಾ ಕುತೂಹಲದ ವಿಷಯಗಳಾಗಿವೆ. ಈ ಹಿನ್ನೆಲೆಯಲ್ಲಿ ಇದನ್ನು ಅಧ್ಯಯನದ ವಿಷಯವಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಕನ್ನಡಭಾಷೆಯಲ್ಲಿ ಈ ರೀತಿಯಾದಂತಹ ಸಂಶೋಧನೆಗಳಿಂದ ಮಕ್ಕಳಲ್ಲಿ ಭಾಷಾ ಕೌಶಲ್ಯಗಳನ್ನು ಬೆಳೆಸುವುದಕ್ಕೆ ಮತ್ತು ಭಾಷಾ ಸಾಮರ್ಥ್ಯವನ್ನು ಪಡೆಯಲು ಮಕ್ಕಳಲ್ಲಿರುವಂತಹ ತೊಂದರೆಗಳನ್ನು ತಿಳಿಯಲು ಸಹಾಯಕವಾಗುತ್ತದೆ. ಈ ರೀತಿಯಾದಂತಹ ಅಧ್ಯಯನಗಳಿಂದ ಶಿಕ್ಷಣ, ವೈದ್ಯಕೀಯ ಹಾಗೂ ಭಾಷಾ ಕ್ಷೇತ್ರಕ್ಕೆ ಸಹಾಯವಾಗುತ್ತದೆ ಎನ್ನುವ ಆಶಯವನ್ನು ಹೊಂದಲಾಗಿದೆ.

ಅಧ್ಯಯನದ ವ್ಯಾಪ್ತಿ: ಅಧ್ಯಯನದಲ್ಲಿ ಧ್ವನಿಗಳ ಉಚ್ಚಾರಣೆಯನ್ನಾಗಲಿ ಆಕೃತಿಮಗಳ ರಚನೆಯ ಬಗ್ಗೆಯಾಗಲಿ, ಪ್ರಸ್ತುತಗೊಳಿಸುತ್ತಿಲ್ಲ. ಇವುಗಳು ಕೇವಲ ಪೂರಕ ಅಂಶಗಳಾಗಿ ಮಾತ್ರ ಬರುತ್ತವೆ. ಯಾವುದೇ ಸಾಮಾಜಿಕ

ಉಪಭಾಷೆಯನ್ನು ಅಥವಾ ಪ್ರಾದೇಶಿಕ ಪ್ರಬೇಧವನ್ನು ಒಳಗೊಂಡಿಲ್ಲ ಮತ್ತು ದ್ವಿಭಾಷಿಕ ಸನ್ನಿವೇಶವನ್ನು ಒಳಗೊಳ್ಳುವುದಿಲ್ಲ. ಕನ್ನಡ ಮನೆ ಭಾಷೆಯುಳ್ಳ ಮಕ್ಕಳನ್ನು ಆಯ್ಕೆ ಮಾಡಿಕೊಂಡ ಸೀಮಿತ ವ್ಯಾಪ್ತಿಯುಳ್ಳ ಅಧ್ಯಯನವಾಗಿದೆ.

## ಅಧ್ಯಯನದ ವಿಧಾನ

ಸಾಮಾನ್ಯವಾಗಿ ಮಕ್ಕಳು ಹುಟ್ಟಿದ ನಂತರ ೧೨ ಅಥವಾ ೧೪ ತಿಂಗಳುಗಳಲ್ಲಿ ತಮ್ಮ ಭಾಷಿಕ ಅಂತಸ್ಥ ತಿಳುವಳಿಕೆಯನ್ನು ಪದಗಳ ಮೂಲಕ ಅಭಿವ್ಯಕ್ತಗೊಳಿಸುತ್ತಾರೆ. ೧೮ ತಿಂಗಳ ವಯೋಮಾನದಲ್ಲಿ ಪದಗಳ ಜೋಡಣೆಯನ್ನು ಮಾಡಲು ಆರಂಭಿಸುತ್ತಾರೆ. ಇದು ರಾಚನಿಕ ನಿಯಮಗಳನ್ನು ಗುರುತಿಸಲು ಸೂಕ್ತ ವಯೋಮಾನವಾದ್ದರಿಂದ ಪ್ರಸ್ತುತ ಅಧ್ಯಯನದಲ್ಲಿ ಇದನ್ನು ಭಾಷಾ ಅಭಿವ್ಯಕ್ತಿಯ ಪ್ರಾರಂಭಿಕ ಹಂತ ಎಂದು ಗ್ರಹಿಸಲಾಗಿದೆ. ಅಧ್ಯಯನಕ್ಕೆ ೧೮ ರಿಂದ ೭೨ ತಿಂಗಳ (೧೧/೨-೬ ವರ್ಷ) ವಯೋಮಿತಿ ಹೊಂದಿರುವ ೪೯ ಮಕ್ಕಳನ್ನು ಆಯ್ಕೆ ಮಾಡಿಕೊಂಡಿದ್ದು, ಈ ವಯೋಮಾನದಲ್ಲಿ ೬ ತಿಂಗಳ ಅಂತರವಿರುವಂತೆ ೧೦ ಗುಂಪುಗಳನ್ನು ಮಾಡಿಕೊಳ್ಳಲಾಗಿದೆ. ಈ ಗುಂಪುಗಳನ್ನು ಗುರುತಿಸಲು ಎ,ಬಿ,ಸಿ,ಡಿ,ಇ,ಎಫ್,ಜಿ,ಎಚ್,ಐ,ಜೆ, ಎಂಬ ಸಂಕೇತಗಳನ್ನು ನೀಡಲಾಗಿದೆ. ಆ ಗುಂಪುಗಳು ಇಂತಿವೆ. ಎ ಗುಂಪು ೧೪ ರಿಂದ ೧೮ ತಿಂಗಳು (೧.೪-೧ ೧/೨ ವರ್ಷ), ಬಿ-೧೮ ರಿಂದ ೨೪ (೧ ೧/೨ -೨ ವರ್ಷ), ಸಿ- ೨೪ ರಿಂದ ೩೦ (೨-೨ ೧/೨), ಡಿ ೩೦ ರಿಂದ ೩೬ (೨ ೧/೨-೩ ವರ್ಷ ), ಇ ೩೬ ರಿಂದ ೪೨ (೩ -೩ ೧/೨ ವರ್ಷ), ಎಫ್ -೪೨ ರಿಂದ ೪೮ (೩ ೧/೨ -೪), ಜಿ ೪೮ ರಿಂದ ೫೪ (೪-೪ ೧/೨), ಹೆಚ್ ೫೪ ರಿಂದ ೬೦ (೪ ೧/೨ -೫), ಐ ೬೦ ರಿಂದ ೬೬ (೫-೫ ೧/೨ ), ಜೆ ೬೬ ರಿಂದ ೭೨ (೫ ೧/೨ -೬ ವರ್ಷ) ಒಂದು ಗುಂಪಿಗೆ ಸೇರಿದ ನಿರ್ದಿಷ್ಟ ವಯೋಮಾನದ ಮಕ್ಕಳು (ಕೆಲವರು) ಮುಂದಿನ ಗುಂಪುಗಳಿಗೂ ಮುಂದುವರೆದಿರುತ್ತಾರೆ. ಮೇಲೆ ತಿಳಿಸಿದ ನಿರ್ದಿಷ್ಟ ವಯೋಮಾನದ ಗುಂಪಿಗೆ ಅನ್ವಯಿಸುವ ಇತರ ಮಕ್ಕಳು ದೊರೆತಾಗ ಆಯಾ ಗುಂಪಿಗೆ ಸೇರಿಸಿಕೊಳ್ಳಲಾಗಿದೆ ಮತ್ತು ಅವರನ್ನು ಅಧ್ಯಯನಕ್ಕೆ ಅಳವಡಿಸಿಕೊಳ್ಳಲಾಗಿದೆ. ಇಲ್ಲಿ ನಿರ್ದಿಷ್ಟ ವಯೋಮಾನದ ಮಕ್ಕಳ ಮಾಹಿತಿ ದತ್ತಾಂಶ ಮುಖ್ಯವಾಗಿರುತ್ತದೆ.

ಅಧ್ಯಯನವನ್ನು ನಿಖರಪಡಿಸಿಕೊಳ್ಳಲು ತೆಗೆದುಕೊಂಡಿರುವ ಕ್ಷೇತ್ರ ಕನ್ನಡ ವಿಶ್ವವಿದ್ಯಾಲಯದ ಸಿಬ್ಬಂದಿ ವರ್ಗದವರ ಮಕ್ಕಳು, ವಿಶ್ವವಿದ್ಯಾಲಯದ ಹತ್ತಿರವಿರುವ ಕಮಲಾಪುರ (ಹೊಸಪೇಟೆ ತಾಲ್ಲೂಕು), ಹೆಚ್.ಪಿ.ಸಿ. ಹೊಸಪೇಟೆ ತಾಲ್ಲೂಕು ಮತ್ತು ಹೊಸಪೇಟೆ ಬಳಿ ಇರುವ ಎಮ್.ಪಿ. ಪ್ರಕಾಶನಗರ ಹಾಗೂ ಬಳ್ಳಾರಿ ಮತ್ತು ಬಳ್ಳಾರಿ ಜಿಲ್ಲೆಯ ಕೊರ್ಲಗುಂದಿ ಗ್ರಾಮವನ್ನು ನಿಗದಿಪಡಿಸಿಕೊಳ್ಳಲಾಗಿದೆ. ಮಾಹಿತಿಯನ್ನು ಖಚಿತಪಡಿಸಿಕೊಳ್ಳಲು ವಿವಿಧ ಅಂಗನವಾಡಿ ಕೇಂದ್ರ, ಶಿಶುವಿಹಾರ, ಪೂರ್ವ ಪ್ರಾಥಮಿಕ ಶಾಲೆಗಳನ್ನು ಭೇಟಿ ಮಾಡಿ, ನಿರ್ದಿಷ್ಟ ವಯೋಮಾನಕ್ಕೆ ಸಂಬಂಧಿಸಿದ ಮಕ್ಕಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ ಮತ್ತು ಅವರ ಶಿಕ್ಷಕರಿಂದ ಮಾಹಿತಿಯನ್ನು ಪಡೆಯಲಾಗಿದೆ. ಎಲ್ಲಿಯಾದರೂ ಹೋದಾಗ ಮಕ್ಕಳಿರುವ ಮನೆಯಾಗಿದ್ದರೆ ನಿರ್ದಿಷ್ಟ ಪ್ರದೇಶ ಕ್ಷೇತ್ರ ಎನ್ನದೆ, ಆ ಮಕ್ಕಳಿಂದ ಅವರ ಮನೆಯ ಜನಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅಧ್ಯಯನಕ್ಕೆ ಒಳಪಟ್ಟಿರುವಂತಹ ಮಕ್ಕಳು ವಿವಿಧ ವರ್ಗ ಮತ್ತು ವಿವಿಧ ಜಾತಿಗಳಿಗೆ ಸೇರಿದವರಾಗಿದ್ದಾರೆ. ಇಲ್ಲಿ ಯಾವುದೇ ಒಂದು ವರ್ಗ ಅಥವಾ ಜಾತಿಯನ್ನು ಗಣನೆಗೆ ತೆಗೆದುಕೊಂಡಿರುವುದಿಲ್ಲ.

ಅಧ್ಯಯನಕ್ಕೆ ಬಳಸಿಕೊಂಡಿರುವ ಸಲಕರಣೆಗಳು -ಧ್ವನಿ ಮುದ್ರಣ (ಟೇಪ್ ರೆಕಾರ್ಡರ್), ಆಟಿಕೆ ಸಾಮಾನುಗಳು, ಪುಸ್ತಕ, ಪೆನ್ನು, ಪೂರ್ವ ಪ್ರಾಥಮಿಕ ಶಿಕ್ಷಣದಲ್ಲಿ ಬಳಸುವ ಪುಸ್ತಕಗಳು (ಚಿತ್ರಗಳನ್ನು ಒಳಗೊಂಡಿರುತ್ತದೆ). ದಿನ ಬಳಕೆಯ ಸಾಮಾನುಗಳು (ಮನೆಯಲ್ಲಿ ಮಕ್ಕಳಿಗೆ ಸುಲಭವಾಗಿ ದೊರಕುವಂತಹವು) ಇತ್ಯಾದಿ.

ಮಕ್ಕಳಿಂದ ಭಾಷಿಕ ದತ್ತಾಂಶವನ್ನು ಪಡೆಯಲು ಅಳವಡಿಸಿಕೊಂಡ ವಿಧಾನ ಅಥವಾ ಪದ್ಧತಿಗಳು.

**ಅವಲೋಕನ ವಿಧಾನ:**

**ಅನಿಯೋಜಿತ ಪದ್ಧತಿ:** ಅಧ್ಯಯನ ಕೈಗೊಂಡ ಆರಂಭದ ಹಂತದಲ್ಲಿ ಯಾವುದೇ ಪೂರ್ವ ಯೋಜನೆ ಇರದೆ ಸಹಜವಾಗಿ ದಿನನಿತ್ಯ ಹಲವು ಮಕ್ಕಳನ್ನು ನೋಡುತ್ತಿರುವುದು. ಆ ಮಕ್ಕಳ ಭಾಷಿಕ ಅಭಿವ್ಯಕ್ತಿಯನ್ನು ಗಮನಿಸುವುದು ಮತ್ತು ಮಕ್ಕಳ ನಡುವೆ ನಡೆಯುವ ಪರಸ್ಪರ ಸಂವಹನವನ್ನು ಗಮನಿಸಲಾಗಿದೆ. ಇಲ್ಲಿ ಯಾವುದೇ ನಿರ್ದಿಷ್ಟ ದೃಷ್ಟಿಕೋನವನ್ನು ಹೊಂದಿರುವುದಿಲ್ಲ. ಅವರ ಪೋಷಕರಿಂದ ಮಕ್ಕಳ ವಯೋಮಾನವನ್ನು ತಿಳಿಯುವುದು ನಂತರ ಮಕ್ಕಳಿಂದ ದೊರೆತ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಣೆಗೆ ಒಳಗು ಮಾಡಲಾಗಿದೆ.

**ನಿಯೋಜಿತ ಅವಲೋಕನ:** ಅಧ್ಯಯನಕ್ಕೆ ಒಳಪಡಿಸಿರುವ ಮಕ್ಕಳ ಪೋಷಕರಿಗೆ ಮಕ್ಕಳ ಭಾಷಿಕ ದತ್ತಾಂಶವನ್ನು ದಾಖಲಿಸಲು ಪುಸ್ತಕ ಮತ್ತು ಪೆನ್ನುಗಳನ್ನು ಕೊಡಲಾಗಿತ್ತು. ಮಕ್ಕಳ ಭಾಷಿಕ ಅಭಿವ್ಯಕ್ತಿಯ ಸಂದರ್ಭವನ್ನು ಸೂಚಿಸುವಂತೆ ತಿಳಿಸಲಾಗಿತ್ತು. ಮಕ್ಕಳಲ್ಲಿಗೆ ಸಂದರ್ಶನಕ್ಕೆ ಹೋಗುವಾಗ ಧ್ವನಿ ಮುದ್ರಣವನ್ನು ಪುಸ್ತಕ, ಪೆನ್ನನ್ನು ತೆಗೆದುಕೊಂಡು ಹೋಗುವುದು, ಮಕ್ಕಳ ಭಾಷಿಕ ಅಭಿವ್ಯಕ್ತಿಯನ್ನು ಎರಡು ಮಾದರಿಗಳಲ್ಲಿ ಸಂಗ್ರಹಿಸಲಾಗಿದೆ. ಒಂದು ಟೇಪ್‌ರೆಕಾರ್ಡನ್ನು ಬಳಸಿ ಸಂಗ್ರಹ ಮಾಡಿರುವುದು. ಎರಡು ಭಾಷಾಭಿವ್ಯಕ್ತಿಯನ್ನು ಕೇಳಿಸಿಕೊಂಡು ಪುಸ್ತಕದಲ್ಲಿ ದಾಖಲೀಕರಣ ಮಾಡಿರುವುದು. ಸಾಧ್ಯವಾದ ಕಡೆ ರೆಕಾರ್ಡ್ ಮಾಡುವುದು ಮತ್ತು ಕೆಲವು ಮಾಹಿತಿಯನ್ನು ಪುಸ್ತಕದಲ್ಲಿ ದಾಖಲೀಕರಣ ಮಾಡಲಾಗಿದೆ.

**ಸಹಜ ಅವಲೋಕನ:** ಮಗುವನ್ನು ಯಾವುದೇ ನಿಯಮವಿಲ್ಲದೆ ವಿವಿಧ ವಾತಾವರಣದಲ್ಲಿ ವೀಕ್ಷಿಸುವುದು. ಮನೆಯಲ್ಲಿ ಸದಸ್ಯರೊಂದಿಗೆ ಮಾತಾಡುವಾಗ, ಹೊರಗೆ ಪಾರ್ಕ್‌ನಲ್ಲಿ ಆಟ ಆಡುವ ಸಂದರ್ಭದಲ್ಲಿ, ಸಹಪಾಠಿಗಳೊಂದಿಗೆ ಬೆರೆತು ಸಂವಹನ ಮಾಡುವುದನ್ನು ಗಮನಿಸಲಾಗಿದೆ. ಆ ಮಕ್ಕಳಿಗೆ ತಮ್ಮನ್ನು ಗಮನಿಸುತ್ತಿದ್ದಾರೆ ಎನ್ನುವ ಭಾವನೆ ಕಾಣದ ಹಾಗೆ ಅವರನ್ನು ಅಧ್ಯಯನ ಮಾಡುವುದು ಅವರೊಂದಿಗೆ ಬೆರೆತು ಆಟವಾಡುವುದು, ಮಾತನಾಡುವುದು. ಅಲ್ಲಿ ಸಿಕ್ಕ ದತ್ತಾಂಶವನ್ನು ಸಾಧ್ಯವಾದಲ್ಲಿ ಅಲ್ಲೇ ದಾಖಲಿಸುವುದು ಅಥವಾ ಮನೆಗೆ ಬಂದ ನಂತರ ಅದನ್ನು ಕಾರ್ಡ್‌ಗಳಲ್ಲಿ ದಾಖಲಿಸುವುದು. ಈ ವಿಧಾನದಲ್ಲಿ ಪೋಷಕರ ಸಹಕಾರ, ಸಹಾಯದಿಂದ ಧ್ವನಿಮುದ್ರಣವನ್ನು ಬಳಸಿಕೊಳ್ಳಲಾಗಿದೆ.

**ನಿಯಂತ್ರಿತ ಅವಲೋಕನ:** ಮಗುವನ್ನು ಕೆಲವು ಸಮಯದವರೆಗೆ ನಿಯಂತ್ರಿತ ಸನ್ನಿವೇಶಕ್ಕೆ ಒಳಪಡಿಸಿ ಅವರ ಕುಟುಂಬದವರ ಸಹಕಾರದಿಂದ ಮಗು ಬೇರೆಡೆ ಹೋಗದಂತೆ ವಿವಿಧ ಆಟಿಕೆಗಳನ್ನು ಕೊಡುವುದು. ಮಗು ಮಾತನಾಡಲು ಬೇಕಾದಂತಹ ಸನ್ನಿವೇಶವನ್ನು ಉಂಟು ಮಾಡುವುದು. ಇಲ್ಲಿ ಮಕ್ಕಳಿಗೆ ಹತ್ತಿರವಾದಂತಹ ಪ್ರೀತಿಪಾತ್ರರೂ ಇರುವಂತೆ ಮಗುವಿನ ಅನುಮಾನಕ್ಕೆ ಆಸ್ಪದ ಕೊಡದೆ ಸಹಜವಾಗಿ ಈ ಪ್ರಕ್ರಿಯೆಯನ್ನು ನಡೆಸಲಾಗಿದೆ. ಈ ಮೂಲಕ ದೊರೆತ ಮಾಹಿತಿಯನ್ನು ಸಂಗ್ರಹಿಸಲಾಗಿದೆ.

**ಪ್ರಾಯೋಗಿಕ ವಿಧಾನ:** ಅಧ್ಯಯನಕ್ಕೆ ಒಳಪಡುವ ಮಗುವಿನ ಭಾಷಿಕ ಸಾಮಾರ್ಥ್ಯವನ್ನು ತಿಳಿಯಲು ಆಟಿಕೆಗಳನ್ನು ಬಳಸುವುದು. ಈ ಮೂಲಕ ನಿರ್ದಿಷ್ಟ ಪದಗಳ ವಾಕ್ಯಗಳ ಅಭಿವ್ಯಕ್ತಿಯನ್ನು ಅರಿಯಲು ಪ್ರಯತ್ನಿಸಲಾಗಿದೆ. ಉದಾ: ಅಲ್ಲ ಎನ್ನುವ ನಿಷೇಧ ಮಗುವಿಗೆ ಅರ್ಥವಾಗಿದೆಯೇ; ಮತ್ತು ಅದನ್ನು ಸಂದರ್ಭಕ್ಕೆ ತಕ್ಕ ಹಾಗೆ ಅಭಿವ್ಯಕ್ತಿಗೊಳಿಸುತ್ತದೆಯೇ; ಎಂದು ಅರಿಯಲು ಬೊಂಬೆಯನ್ನು ನೇರವಾಗಿ ಕೂಡಿಸದೆ ತಲೆಕೆಳಗೆ ಮಾಡಿ ಇಡುವುದು ಹೀಗೆ ಮಗುವಿನ ಮುಂದೆ ಪದೇ ಪದೇ ಬೊಂಬೆಯನ್ನು ಇಟ್ಟು ಹೀಗೆ ಕೂಡಿಸಬೇಕು ಎಂದಾಗ ಮಗು ಅದು ಸರಿಯಾದ ವಿಧಾನವಲ್ಲ ಎಂದು ಹೇಳಲು ಅಲ್ಲ ಎನ್ನುವ ನಿಷೇಧವನ್ನು ಬಳಸುತ್ತದೆ.

ವಿವಿಧ ಚಿತ್ರಗಳನ್ನು ತೋರಿಸುವುದರ ಮೂಲಕ ಪ್ರಶ್ನೆಗಳನ್ನು ಕೇಳುವುದು. ಆಗ ಮಗುವೇ ಕೆಲವು ಪ್ರಶ್ನೆಗಳನ್ನು ಕೇಳುತ್ತದೆ. ಈ ವಿಧಾನವನ್ನು ಸಹಜ ಮತ್ತು ನಿಯಂತ್ರಿತ ಪದ್ಧತಿಯಲ್ಲಿ ಅಳವಡಿಸಿಕೊಳ್ಳಲಾಗಿದೆ. ವಿವಿಧ ಪ್ರಶ್ನೆಗಳನ್ನು ಕೇಳುವ ಮೂಲಕ ಮಗುವಿನ ಭಾಷಿಕ ಅಭಿವ್ಯಕ್ತಿಯ ಕ್ರಮವನ್ನು ಅರಿಯುವುದು. ಈ ಎಲ್ಲಾ ವಿಧಾನಗಳಿಂದ ದೊರೆತ ಮಾಹಿತಿಯ ದತ್ತಾಂಶವನ್ನು ಆಯಾ ದಿನದಂದು ದಾಖಲಿಸುವುದು. ಮಾಹಿತಿಯನ್ನು ದಾಖಲಿಸಲು ಕಾರ್ಡ್‌ಗಳನ್ನು ಬಳಸಿಕೊಳ್ಳಲಾಗಿದೆ. ಹಿಂದೆ ತಿಳಿಸಿದ ನಿರ್ದಿಷ್ಟ ವಯೋಮಾನದ ಮಕ್ಕಳ ದತ್ತಾಂಶವನ್ನು ದಾಖಲಿಸಿಕೊಳ್ಳುವಾಗ ಮಕ್ಕಳ ಭಾಷಿಕ ಅಭಿವ್ಯಕ್ತಿಯ ಸಂದರ್ಭ, ಸನ್ನಿವೇಶ, ದಿನಾಂಕ, ಸಾಧ್ಯವಾದಲ್ಲಿ ಸಮಯವನ್ನು ಕೂಡ ದಾಖಲಿಸಲಾಗಿದೆ.

ಅಧ್ಯಯನಕ್ಕೆ ಒಳಪಟ್ಟಿರುವ ಎಲ್ಲ ಮಕ್ಕಳನ್ನು ಈ ವಿಧಾನದಲ್ಲಿ ನಿಯತವಾಗಿ ಕನಿಷ್ಠ ಮೂರು ತಿಂಗಳುಗಳು ಅಧ್ಯಯನಕ್ಕೆ ಒಳಪಡಿಸಲಾಗಿದೆ. 'ಎ' ಗುಂಪಿಗೆ ಸೇರಿದ ಮಕ್ಕಳು 'ಬಿ' ಗುಂಪಿಗೂ ಮುಂದುವರೆದಿರುತ್ತಾರೆ. 'ಬಿ' ಮತ್ತು 'ಸಿ' ಗುಂಪಿನ ಮಕ್ಕಳನ್ನು ವಾರಕ್ಕೆ ಕನಿಷ್ಟ ಮೂರು ಬಾರಿಯಂತೆ, 'ಡಿ' ಮತ್ತು 'ಇ' ಗುಂಪಿನ ಮಕ್ಕಳನ್ನು ವಾರಕ್ಕೆ ಎರಡು ಬಾರಿಯಂತೆ, 'ಎಫ್' ಮತ್ತು 'ಜಿ' ಗುಂಪಿಗೆ ಸೇರಿದ ಮಕ್ಕಳನ್ನು ವಾರಕ್ಕೆ ಒಂದು ಬಾರಿಯಂತೆ, 'ಹೆಚ್' ಮತ್ತು 'ಐ' ಗುಂಪಿನ ಮಕ್ಕಳನ್ನು ಹತ್ತು ದಿನಗಳಿಗೊಮ್ಮೆ ಸಂದರ್ಶನ ಮಾಡಲಾಗಿದೆ. 'ಜೆ' ಗುಂಪಿಗೆ ಸೇರಿದ ಮಕ್ಕಳ ಮಾಹಿತಿಯನ್ನು ಶಾಲೆಗಳಲ್ಲಿ, ಮನೆಗಳಲ್ಲಿ ಪಡೆಯಲಾಗಿದೆ. ಇಲ್ಲಿ ಇಂತಿಷ್ಟೆ ದಿನಗಳು, ತಿಂಗಳು ಎಂದು ಸಮಯದ ಚೌಕಟ್ಟನ್ನು ನಿರ್ದಿಷ್ಟಗೊಳಿಸಿಕೊಂಡಿರುವುದಿಲ್ಲ.

ಅಧ್ಯಾಯ-೨

# ಮೆದುಳಿನ ರಚನೆ ಮತ್ತು ಮೆದುಳು -ಭಾಷೆಗೆ ಇರುವ ಸಂಬಂಧ

ಕಳೆದ ಸುಮಾರು ೧೬೦ ವರ್ಷಗಳಿಂದ ಭಾಷಾಶಾಸ್ತ್ರಜ್ಞರು ಮೆದುಳಿಗೂ ಭಾಷೆಗೂ ಸಂಬಂಧವಿದೆ ಎಂಬುದನ್ನು ಅಧ್ಯಯನದ ಮೂಲಕ ಸ್ಪಷ್ಟಪಡಿಸಿದ್ದಾರೆ. ಮೆದುಳಿನ ಯಾವುದೇ ಒಂದು ಭಾಗವು ನಿಷ್ಕ್ರಿಯವಾದಾಗ ಅಥವಾ ಆಘಾತವಾದಾಗ, ಮನುಷ್ಯ ಹಲವಾರು ಸಾಮರ್ಥ್ಯಗಳನ್ನು ಕಳೆದುಕೊಳ್ಳುವುದಿಲ್ಲ. ಭಾಷೆಯ ಸಾಮರ್ಥ್ಯವು ಒಂದು ಮಾನಸಿಕ ಪ್ರಕ್ರಿಯೆ ಒಂದು ರಚನೆ. ಅದನ್ನು ನಿಯಂತ್ರಣ ಮಾಡುವುದು ಮೆದುಳು. ಮೆದುಳಿನಿಂದ ಮನಸ್ಸು ರೂಪಗೊಂಡಿರುತ್ತದೆಯೇ ಹೊರತು, ಹೃದಯದಿಂದಲ್ಲ. ದೇಹದ ಹಲವಾರು ಅಂಗಗಳಲ್ಲಿ ಮೆದುಳು ಅತ್ಯಂತ ಪ್ರಮುಖ ಅಂಗ. ಇದು ಮಾನವನಿಗೆ ವಿಶಿಷ್ಟವಾದದ್ದು. ಕಾರಣ ಅದರ ರಚನೆ ಮತ್ತು ಕಾರ್ಯವೈಖರಿ. ಯಾವುದಾದರೂ ಒಂದು ಅಂಗ, ಆ ಅಂಗಕ್ಕೆ ಸಂಬಂಧಿಸಿದ ಕೆಲವು ಕೆಲಸಗಳನ್ನು ನಿಯಂತ್ರಿಸುತ್ತಿರುತ್ತದೆ. ಅಂದರೆ ಆ ಭಾಗ ಇಡಿಯಾಗಿ ಕೆಲಸ ಮಾಡುವುದಿಲ್ಲ. ಆ ಅಂಗದ ಒಂದೊಂದು ಭಾಗ ಬೇರೆ ಬೇರೆ ಕೆಲಸಗಳನ್ನು ಮಾಡುತ್ತಿರುತ್ತದೆ. ಕಾರ್ಯವಿಂಗಡನೆ ಮುಖಾಂತರ ಮೆದುಳಿಗೆ ಹಲವಾರು ಕ್ಷೇತ್ರವಿದ್ದು, ಆಯಾ ಕ್ಷೇತ್ರಕ್ಕೆ ತಕ್ಕಂತೆ ಮೆದುಳು ತನ್ನ ಕಾರ್ಯವನ್ನು ನಿರ್ವಹಿಸುತ್ತಿರುತ್ತದೆ. ಇದನ್ನು 'ಮಾಡ್ಯುಲ್ಯಾರಿಟಿ' ಎಂದು ಕರೆಯುತ್ತಾರೆ.

ಮೆದುಳು ಮೂರು ಭಾಗಗಳನ್ನು ಹೊಂದಿದೆ. ಆಯಾ ಭಾಗ ಕೆಲವು ಮುಖ್ಯಕಾರ್ಯ ನಿರ್ವಹಿಸುತ್ತದೆ. ೧. ಮುಮ್ಮೆದುಳು, ೨. ನಡು ಮೆದುಳು ಮತ್ತು ೩. ಹಿಮ್ಮೆದುಳು. ಮಾನವನ ಮೆದುಳು ತುಂಬಾ ಸಂಕೀರ್ಣವಾಗಿರುವುದರಿಂದ ಅಧ್ಯಯನದ ಅನುಕೂಲಕ್ಕಾಗಿ ಭೌತಿಕವಾಗಿ ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅವುಗಳನ್ನು ಎಡ ಮತ್ತು ಬಲ ಹೆಮಿಸ್ಫಿಯರ್‌ಗಳು ಎಂದು ಕರೆಯಲಾಗಿದೆ. ಒಂದು ನಿರ್ದಿಷ್ಟ ಕಾಲಘಟ್ಟದವರೆಗೆ ಇಡಿಯಾಗಿ ಕಾರ್ಯ ನಿರ್ವಹಿಸುತ್ತದೆ. ನಂತರ ವಿಭಜನೆ ಹೊಂದಿ ಬಲ ಮತ್ತು ಎಡ ಭಾಗಗಳಾಗಿ ತಮ್ಮ ಕಾರ್ಯನಿರ್ವಹಿಸುತ್ತವೆ. ಎರಡೂ ಹೆಮಿಸ್ಫಿಯರ್‌ಗಳನ್ನು ನರಗಳ ಫೈಬರ್‌ನ ಗುಚ್ಚ ಜಂಟಿಯಾಗಿಸುತ್ತದೆ. ಇದನ್ನು ಕಾರ್ಪಸ್ ಕೊಲಾಸಮ್ ಎಂದು ಕರೆಯಲಾಗುತ್ತದೆ. ಈ ನರಗಳ ಗುಚ್ಚ (ಬಂಡಲ್) ಮತ್ತು ಇನ್ನಿತರ ಆಂತರಿಕ ಹೆಮಿಸ್ಫಿಯರ್‌ಗಳ ಸಂಬಂಧಗಳು ಈ ಎರಡೂ ಹೆಮಿಸ್ಫಿಯರನ್ನು ಪರಸ್ಪರ ಒಂದಕ್ಕೊಂದು ಸಂವಹನಗೊಳ್ಳಲು ಅವಕಾಶ ಮಾಡಿಕೊಡುತ್ತದೆ. ಮೆದುಳಿನ ಎಡ ಭಾಗದಲ್ಲಿ ಬ್ರೋಕಾ ಮತ್ತು ವರ್ನಿಕ ಎಂಬ ಪ್ರದೇಶಗಳಿರುತ್ತವೆ. ಇವು ಭಾಷೆಯ ಸಾಮರ್ಥ್ಯದಲ್ಲಿ ಮಹತ್ತರ ಪಾತ್ರವನ್ನು ವಹಿಸುತ್ತವೆ. ಈ ಎರಡನ್ನು ೧/೪ ಇಂಚುಳ್ಳ ಕಾರ್ಪಸ್ ಎನ್ನುವ ಭಾಗ ಆವರಿಸಿಕೊಂಡಿರುತ್ತದೆ. ಇದನ್ನು ಆವರಿಸಿಕೊಂಡಿರುವ ಭಾಗ ಚಪ್ಪಟೆಯಾಗಿರದೆ ಬದಲಾಗಿ ಉಬ್ಬುತಗ್ಗುಗಳಿಂದ ಕೂಡಿರುತ್ತದೆ. ಹೆಮಿಸ್ಫಿಯರ್‌ನಲ್ಲಿ ಉಬ್ಬುಗಳನ್ನು ಗೈರಿ ಮತ್ತು ತಗ್ಗುಗಳನ್ನು ಫ್ಶಿಶರ್ಸ್ ಎಂದು ಕರೆಯಲಾಗುತ್ತದೆ (ಡಾ.ಕೆ.ವಿ. ನಾರಾಯಣ ೨೦೦೩-೨೦೦೪ ಎಂ.ಎ. ತರಗತಿಯ ಪಾಠಗಳು). ಭಾಷೆ ಮೆದುಳಿಗೆ ಸಂಬಂಧಿಸಿದ ಪ್ರಕ್ರಿಯೆ ಎಂದು ಹೇಳಲು ಇದು ನಿದರ್ಶನವಾಗಿದೆ.

೨.೧ ಲ್ಯಾಟರಲೈಜೇಷನ್:- ಕೆಲವು ಕಾರ್ಯಗಳು ಕೆಲವು ಭಾಗಗಳಿಗೆ ಮಾತ್ರ ಸೀಮಿತವಾಗಿರುತ್ತದೆ. ಪ್ರತಿಭಾಗದ ಮೆದುಳಿಗೂ ತನ್ನದೇ ಆದ ಕಾರ್ಯವಿಂಗಡನೆ ಇರುತ್ತದೆ. ಒಂದು ಮತ್ತೊಂದರ ಕಾರ್ಯವನ್ನು ನಿರ್ವಹಿಸುವುದಿಲ್ಲ. ಎಡಭಾಗದ ಮೆದುಳು ಗಾಯಗೊಂಡಾಗ ಇದು ಭಾಷಿಕ ಬೆಳವಣಿಗೆಯನ್ನು ಹೆಚ್ಚಿಸುವುದಿಲ್ಲ. ಆದ್ದರಿಂದ ೧೦೦ಕ್ಕೆ ೭೦ ರಷ್ಟು ಜನರಲ್ಲಿ ಮೆದುಳಿನ ಎಡಭಾಗವು ಗಾಯಗೊಂಡುದರಿಂದ ಅಫ್ಷೇಸಿಯಾದಿಂದ ನರಳುತ್ತಾರೆ. ಅಂದರೆ

ಭಾಷೆಯ ಗ್ರಹಿಕೆ ಮತ್ತು ಉಚ್ಚಾರಣೆ ಮಾಡಲು ಸಾಧ್ಯವಾಗುವುದಿಲ್ಲ.

ಹೆಮಿಸ್ಫಿಯರಿಕ್ ಮೆದುಳಿನ ಯಾವುದೇ ಒಂದು ಭಾಗವನ್ನು ಆಪರೇಷನ್ ಮಾಡಿ ತೆಗೆದಾಗ ಆ ಮೆದುಳಿನ ಪ್ರತ್ಯೇಕ ಕಾರ್ಯವು ಸ್ಥಗಿತಗೊಂಡಿರುತ್ತದೆ. ಹಾಗಾಗಿ ಅದನ್ನು ಗುರುತಿಸಬಹುದು. ಮೆದುಳಿಗೆ ಏನಾದರೂ ಗಾಯಗೊಂಡಾಗ ಅವರ ನಡವಳಿಕೆ ಮತ್ತು ಯೋಚನಾ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತಾರೆ. ಹೀಗಾಗಿ ಮೆದುಳಿನ ಎಡಭಾಗವು ಭಾಷಾ ಸಾಮರ್ಥ್ಯಕ್ಕೆ ಸಂಬಂಧಿಸಿದ್ದು ಎಂದು ತಿಳಿದುಬರುತ್ತದೆ. ಆದರೆ ಬಲಭಾಗ ಈ ಕಾರ್ಯದಲ್ಲಿ ಹೆಚ್ಚಿನ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಇದು ಭಾಷೆ ಲ್ಯಾಟರಲೈಜೇಷನ್ ಆಗಿದೆ ಎಂಬುದನ್ನು ಸೂಚಿಸುತ್ತದೆ. ಮೆದುಳಿನ ಎಡಭಾಗವು ಭಾಷೆಗೆ ಸಂಬಂಧಿಸಿದ ಪ್ರದೇಶಗಳನ್ನು ಹೊಂದಿದೆ. ಮೆದುಳಿನ ಬಲಭಾಗವು ಭಾವನೆಗಳನ್ನು ಪ್ರಕಟಗೊಳಿಸುವಲ್ಲಿ ನೆರವಾಗುತ್ತದೆ. ಭಾವನೆಗಳಿಲ್ಲದೆ ಭಾಷೆ ಇಲ್ಲ. ಮಗು ಹುಟ್ಟಿನಿಂದಲೇ ಭಾವನೆಗಳನ್ನು ವಿವಿಧ ರೂಪದಲ್ಲಿ ವ್ಯಕ್ತಪಡಿಸುವುದನ್ನು ಆರಂಭಿಸುತ್ತದೆ. ಭಾಷೆ ಅಂತಸ್ಥ ಸಾಮರ್ಥ್ಯ ಅದು ಮೆದುಳಿಗೆ ಸಂಬಂಧಿಸಿದ ಪ್ರಕ್ರಿಯೆ ಎಂದು ಹೇಳುವಾಗ ಈ ವಿವರಣೆ ಅಗತ್ಯವಾಗುತ್ತದೆ.



ಮೆದುಳಿನ ಎಡಭಾಗದ ಚಿತ್ರ

ಮೆದುಳು ಒಂದು ಆಯಸ್ಕಾಂತೀಯ ವಿದ್ಯುತ್ ಜಾಲವಾಗಿದ್ದು, ಇದರ ಸೂಕ್ಷ್ಮರೂಪವೇ ಮನಸ್ಸು ಎನಿಸಿಕೊಳ್ಳುತ್ತದೆ. ಮೆದುಳಿನ ಎಡಭಾಗದಲ್ಲಿರುವ ಬ್ರೋಕಾ, ವರ್ನಿಕ್‌ನ ಕೋಶಗಳು ಭಾಷೆಯನ್ನು ಅಂಕಣಗಳಾಗಿ ವಿಭಜಿಸುವ ಸಾಮರ್ಥ್ಯವನ್ನು ಪಡೆದಿವೆ. ಭಾಷೆ ಎನ್ನುವುದು ಮನಸ್ಸಿನ ಸಂಕಲ್ಪದಿಂದ ವ್ಯಕ್ತವಾಗುವುದಿದ್ದು, ಇದರ ಸ್ಥೂಲರೂಪವಾದ ಮೆದುಳಿನ ನರಮಂಡಲದ ವಿದ್ಯುತ್‌ಕಾಂತೀಯ ತರಂಗಗಳು ವಾಕ್ಯದ ವಿವಿಧ ವಿಭಾಗಗಳನ್ನು ಸ್ಪಷ್ಟಗೊಳಿಸಿಕೊಡುತ್ತವೆ. ಒಂದು ವಾಕ್ಯದಲ್ಲಿ ಸಂಪೂರ್ಣ ವಸ್ತು ವಿಷಯವನ್ನು ವ್ಯಕ್ತಪಡಿಸುವುದು ಮನಸ್ಸಾದರೂ ಅದರ ವಿವಿಧ ವಿಭಾಗಗಳನ್ನು ಬ್ರೋಕಾ ಮತ್ತು ವರ್ನಿಕ್‌ನ ಕೋಶಗಳಿಂದ ಹೊರಡುವ ವಿಭಿನ್ನವಾದ ಅತಿ ಸಣ್ಣ ನರತಂತುಗಳು ವಾಕ್ಯದ ವಿಭಿನ್ನ ಭಾಗಗಳನ್ನು ಹೊರಸೂಸುತ್ತವೆ. ವಾಕ್‌ದೋಷವಿರುವ ಮಕ್ಕಳ ಚಿಕಿತ್ಸಾಕ್ರಮದಲ್ಲಿ,

ಇವುಗಳ ವಿಭಿನ್ನತೆಯನ್ನು ನರಮಂಡಲ ವ್ಯವಸ್ಥೆಯ ಸ್ಥೂಲರೂಪದೊಂದಿಗೆ ಅರ್ಥ ಮಾಡಿಕೊಳ್ಳಬಹುದು.

ವ್ಯಾಕರಣ ಪ್ರಜ್ಞೆಯನ್ನು ಮೆದುಳಿನ ವರ್ನಿಕ್ ಪ್ರದೇಶವು ರೂಪಿಸಿಕೊಳ್ಳುತ್ತದೆ ಎನ್ನುವುದನ್ನು ಜೀವಶಾಸ್ತ್ರೀಯ ಮತ್ತು ಮನಶಾಸ್ತ್ರೀಯ ವಿಜ್ಞಾನಿಗಳು ಸ್ಪಷ್ಟಪಡಿಸಿದ್ದಾರೆ. ವರ್ನಿಕ್‌ನ ಪ್ರದೇಶವು ಭಾಷೆಯಲ್ಲಿನ ವ್ಯಾಕರಣ ತತ್ವವನ್ನು ಸೃಷ್ಟಿ ಮತ್ತು ಸಂರಕ್ಷಣೆ ಮಾಡುತ್ತದೆ. ವಾಕ್‌ಶ್ರವಣ ದೋಷವಿರುವ ವ್ಯಕ್ತಿಗಳಲ್ಲಿಯೂ ಈ ಸಂರಕ್ಷಣೆ ಸಾಧ್ಯವಾಗಿದೆ. ಆದ್ದರಿಂದಲೇ ವಾಕ್‌ಸ್ತಂಭನ ದೋಷವಿರುವ ರೋಗಿಗಳು ಚಿಕಿತ್ಸೆಯಿಂದ ಗುಣಮುಖರಾದಾಗ ಮತ್ತೆ ಹೊಸದಾಗಿ ವ್ಯಾಕರಣವನ್ನು ಕಲಿಸಬೇಕಾದ ಅವಶ್ಯಕತೆ ಇರುವುದಿಲ್ಲ. ಭಾವನೆಗಳು ಸರಿಯಾಗಿ ಮೂಡದಿದ್ದರೆ ಭಾಷೆ ಉಚ್ಚಾರಣೆ ಆಗುವುದಿಲ್ಲ. ಇದೇ ಬ್ರೋಕಾ ಮತ್ತು ವರ್ನಿಕ್‌ಗೆ ಇರುವ ಸಂಬಂಧ ಭಾಷೆಯು ಮೂಲವಾಗಿ ಭಾವನೆಗಳ ಆಧಾರದ ಮೇಲೆ ವ್ಯಕ್ತವಾಗುವುದರಿಂದ ಎರಡೂ ಪರಸ್ಪರ ಪೂರಕ ಮತ್ತು ಪೋಷಕಗಳಾಗಿವೆ. ಬ್ರೋಕಾನ ಪ್ರದೇಶವು ಭಾವನೆಗಳ ಉದ್ದೀಪನೆಗೆ ಅವಕಾಶ ಮಾಡಿಕೊಟ್ಟು ತನ್ನ ಮತ್ತು ವರ್ನಿಕ್ ಅಂಕಣಗಳ ಮಧ್ಯದಲ್ಲಿರುವ ನರತಂತುಗಳ ಮೂಲಕ ಭಾವಗಳು ಭಾಷೆಯಾಗಿ ಪರಿವರ್ತನೆಯಾಗಲು ಸಹಾಯವಾಗುತ್ತದೆ. ಈ ಎರಡೂ ಭಾಗಗಳಿಂದ ಪ್ರಧಾನವಾಗಿ ಹೊರಡುವ ೭ನೆಯ ನರವ್ಯವಸ್ಥೆಯು ಅವು ಕ್ರಿಯಾರೂಪವಾಗುವಂತೆ ವ್ಯವಸ್ಥೆಗೊಳಿಸುತ್ತದೆ.

ಭಾಷೆಯು ಸ್ಥಿತಿಸ್ಥಾಪಕತ್ವ ಸ್ವಭಾವವನ್ನು ಹೊಂದಿದ್ದು, ಭಾವಕ್ಕನುಗುಣವಾಗಿ ಪರಿವರ್ತನೆಗೆ ಒಳಪಡುತ್ತಿರುತ್ತದೆ. ಭಾವನೆ ಮತ್ತು ಭಾಷೆಗಳೆರಡೂ ಬ್ರೋಕಾ ಮತ್ತು ವರ್ನಿಕ್‌ನ ಅಂಕಣಗಳಿಂದ ಪ್ರೇರೇಪಿತಗೊಂಡು ಒಟ್ಟಾರೆಯಾದ ಅಭಿವ್ಯಕ್ತಿಯನ್ನು ಹೊರಸೂಸುತ್ತದೆ. ಈ ಕ್ರಿಯೆಯಲ್ಲಿ ನರಮಂಡಲದ ವ್ಯವಸ್ಥೆಯು ನೂರಾರು ನರತಂತುಗಳು ಅಭಿವ್ಯಕ್ತಿಯ ಭಾಷಿಕ ಮತ್ತು ಅಭಾಷಿಕ ರೂಪಗಳನ್ನು ಹೊರಸೂಸುತ್ತವೆ. ಈ ನರತಂತುಗಳು ವೈಯಾಕರಣಿಕ ವಿಧಾನಗಳನ್ನು ವಿಭಿನ್ನವಾಗಿ ಪ್ರವಹಿಸುವಂತೆ ಮಾಡುತ್ತದೆ. ಚಿಕ್ಕ ಅಥವಾ ಅಪ್ರಾಪ್ತ ವಯಸ್ಸಿನ ಮಕ್ಕಳಲ್ಲಿ ಭಾಷಾ ಬಳಕೆಯು ಮೆದುಳಿನ ಭಾಷಾ ಪ್ರದೇಶಗಳನ್ನು ದಿನದಿನಕ್ಕೂ ಬಲಿಷ್ಠಗೊಳಿಸುತ್ತಾ ಹೋಗುತ್ತದೆ.

ಮೆದುಳು ಕೇಂದ್ರ ನರಮಂಡಲವನ್ನು ಹೊಂದಿದ್ದು, ಸಹಸ್ರಾರು ಅಧೀನ ನರಗಳ ಜಾಲವನ್ನೇ ಹೊಂದಿದೆ. ಎಲ್ಲಾ ನರತಂತುಗಳು ಪ್ರತಿಯೊಂದು ಉಪ ಅಂಗಗಳಲ್ಲಿ ಕೆಲಸ ಮಾಡುತ್ತಿದ್ದರೂ ಎಲ್ಲವೂ ಕೇಂದ್ರ ನರಮಂಡಲದಿಂದ ಸೂಚಿತಗೊಳ್ಳುತ್ತವೆ. ಇವೆಲ್ಲದರ ಮೂಲವಾದ ಮೆದುಳು ತನ್ನ ಪ್ರತಿಕಣದಿಂದಲೂ ಒಟ್ಟಾರೆ ಸುಮಾರು ೬,೯೦೦ ಕ್ರಿಯಾಶಕ್ತಿ ಕೇಂದ್ರಗಳನ್ನು ಹೊಂದಿದೆ ಎಂದು ಜೀವಶಾಸ್ತ್ರವು ಸಾದರಪಡಿಸಿದೆ. ನರಮಂಡಲ ವ್ಯವಸ್ಥೆಯನ್ನು ಕುರಿತು ವಿವರಿಸುತ್ತಾ ಜೀವಶಾಸ್ತ್ರವು ನರಗಳನ್ನು ಮಾಹಿತಿ ಸಂವಾಹಕ ವ್ಯವಸ್ಥೆಯ ಜಾಲವೆಂದು ವಿವರಿಸಿದ್ದಾರೆ. ಭೌತಿಕ ಮತ್ತು ರಾಸಾಯನಿಕ ಕ್ರಿಯೆಗಳೆರಡರ ಮೂಲಕ ನರಗಳು ಸಂದೇಶವಾಹಕವಾಗಿ ಕೆಲಸ ಮಾಡುವಲ್ಲಿ ವಿದ್ಯುತ್‌ಜಾಲವಾಗಿ ಕಾರ್ಯನಿರ್ವಹಿಸುತ್ತವೆ. ನರಗಳು ವಿದ್ಯುತ್ ಕಾಂತೀಯ ಕ್ರಿಯೆ ಮೂಲಕ ಸಂದೇಶಗಳು ಶರೀರದ ವಿಭಿನ್ನ ಭಾಗಗಳಿಗೆ ಹರಡುತ್ತವೆ. ಭಾಷಾ ಪ್ರಯೋಗದಲ್ಲಿ ನರಗಳಲ್ಲಿನ ವಿದ್ಯುತ್ ತರಂಗಗಳು ಮನಸ್ಸಿನ ಆಲೋಚನೆಗೆ ಅನುಗುಣವಾದ ಶಬ್ದಗಳನ್ನು ಹೊರಡಿಸಲು ಕಂಠ, ಬಾಯಿ, ನಾಲಿಗೆ, ಮೂಗು ಮೊದಲಾದ ಅಂಗಗಳ ನರವ್ಯವಸ್ಥೆ ಸೂಕ್ತ ಸಂಚಲನವನ್ನು ನೀಡುತ್ತದೆ. ಕಿವಿಯ ಮೂಲಕ ಕೇಂದ್ರ ನರಮಂಡಲದತ್ತ ವಿದ್ಯುತ್ ತರಂಗಗಳ ಸಂಚಾರವನ್ನು ಹೊಂದಿರುವ ನರಗಳ ಮೂಲಕ ಮತ್ತೊಬ್ಬರ ಭಾಷಾ ಪ್ರಯೋಗದ ಗ್ರಹಿಕೆ ಆರಂಭವಾಗುತ್ತದೆ. ಈ ಎರಡೂ ಕ್ರಿಯೆಗಳು ಪ್ರಧಾನವಾಗಿ ಭಾಷಾ ಪ್ರಯೋಗ ಮತ್ತು ಭಾಷಾ ಗ್ರಹಿಕೆಗಳೆರಡಕ್ಕೂ ಸಹಾಯಕವಾಗುತ್ತವೆ. ಭಾಷೆಯ ಮೂಲಕ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವಾಗಲೂ ನರಗಳಲ್ಲಿನ ವಿದ್ಯುತ್ ತರಂಗಗಳು ತೀಕ್ಷ್ಣವಾಗಿ ಕ್ರಿಯಾಶೀಲವಾಗಿರುತ್ತವೆ. ಇಂತಹ ವಿದ್ಯುತ್

ತರಂಗೀಯ ಪ್ರತಿಕ್ರಿಯೆಯಲ್ಲಿ ಭಾಷೆಯನ್ನು ರಚನಾತ್ಮಕವಾಗಿ ವಿಭಜಿಸಿಕೊಳ್ಳುವ ನಿರ್ದಿಷ್ಟ ನರತಂತುಗಳ ಜಾಲವು ಕಾರ್ಯ ಮಾಡುತ್ತದೆ.

ಜೀವಶಾಸ್ತ್ರೀಯವಾಗಿ ಭಾಷಾ, ಗಳಿಕೆ ಮತ್ತು ಪ್ರಸ್ತುತಿಯನ್ನು ವೈದ್ಯಕೀಯ ಚಿಕಿತ್ಸಾತ್ಮಕ ದೃಷ್ಟಿಯಿಂದಲೇ ಅಧ್ಯಯನ ಮಾಡಲಾಗುತ್ತದೆ. ಮೆದುಳಿನ ಎಡಭಾಗದ ವರ್ನಿಕ್‌ನ ಪ್ರದೇಶವು ಭಾಷೆಯನ್ನು ಸಮಗ್ರವಾಗಿ ಗ್ರಹಿಸುವುದಾದರೆ ಬ್ರೋಕಾ ಪ್ರದೇಶವು ಭಾಷಾಯೋಜನೆ ಮತ್ತು ಅದನ್ನು ಪ್ರಕಟಿಸುವ ಸಾಮರ್ಥ್ಯವನ್ನು ಹೊಂದಿರುತ್ತದೆ. ಇವೆರಡರ ನಡುವೆಯ ಶ್ರಾವ್ಯ ಗ್ರಹಿಕೆಯ ಸಂಸ್ಕರಣ ವಿಧಾನವು ಸಹಕಾರಿಯಾಗುತ್ತದೆ. ಒಟ್ಟಾರೆ ಈ ಮೂರು ಕೋಶಗಳು ಶ್ರವಣ, ವಾಚನ ಮತ್ತು ಉಚ್ಚಾರಣ ಮೂರು ವಿಧಾನದಲ್ಲಿ ಭಾಷಾ ಗಳಿಕೆ ಮತ್ತು ಬೆಳವಣಿಗೆಯನ್ನು ಮಾಡುವಲ್ಲಿ ಸಹಕಾರಿಯಾಗುತ್ತದೆ.

ಭಾಷೆಯು ಘಟಕಗಳಾಗಿ ವಿಂಗಡವಾಗುವುದರಿಂದ ಆ ವಿವಿಧ ಘಟಕೀಕರಣಕ್ಕೆ ವಿಶಿಷ್ಟ ವ್ಯವಸ್ಥೆಯೇ ಮೆದುಳಿನಲ್ಲಿದೆ. ಭಾಷಾ ಸಂಬಂಧಿ ಪ್ರಕ್ರಿಯೆಯನ್ನು ಉಂಟು ಮಾಡುವಲ್ಲಿ ಸಾಮಾನ್ಯವಾಗಿ ಮೆದುಳಿನ ಎಡಭಾಗದ ನರನಾಡಿಗಳು ಪ್ರಧಾನ ಪಾತ್ರ ವಹಿಸುತ್ತವೆ. ವಾಕ್ ಮತ್ತು ಶ್ರವಣ ಚಿಕಿತ್ಸೆಯಲ್ಲಿ ಈ ಭಾಗದ ನರಗಳ ಕ್ರಿಯಾಶೀಲತೆ ಮತ್ತು ಕಾರ್ಯಕ್ಷಮತೆಯನ್ನು ಮುಖ್ಯವಾಗಿ ಅಧ್ಯಯನ ಮಾಡಲಾಗುತ್ತದೆ. ಈ ಭಾಗಗಳ ನರಗಳಲ್ಲಿ ಉಂಟಾಗುವ ವ್ಯತ್ಯಾಸಗಳಿಂದ ಭಾಷಾ ಪ್ರಸ್ತುತೀಕರಣದ ದೋಷಗಳು ಹೆಚ್ಚು ಕಂಡುಬರುತ್ತವೆ. ಮಕ್ಕಳಲ್ಲಿ ಒಟ್ಟಾರೆ ಕೇಂದ್ರ ನರಮಂಡಲದ ನರ ವ್ಯವಸ್ಥೆಯಂತೆ ಈ ನರಮಂಡಲಗಳ ಬೆಳವಣಿಗೆಯೂ ಮಂದಗತಿಯಲ್ಲಿ ಆಗುವುದರಿಂದ ಭಾಷಾ ಗ್ರಹಿಕೆಗಳು ನಿಧಾನಗತಿಯಲ್ಲಿ ಬೆಳವಣಿಗೆಯಾಗುತ್ತದೆ. ಇದೇ ಭಾಗದ ನರಮಂಡಲಗಳ ಅವ್ಯವಸ್ಥೆಯಿಂದ ಪಾರ್ಶ್ವ ವಾಯು ಪೀಡಿತರಾದವರಿಗೆ ಮಾತು ಸ್ಪಷ್ಟವಾಗಿ ಬಾರದೆ ಹೋಗುತ್ತದೆ ಅಥವಾ ಸಂಪೂರ್ಣವಾಗಿ ಇಲ್ಲದಂತಾಗುತ್ತದೆ. ಇವುಗಳಿಂದ ನಮಗೆ ಸ್ಪಷ್ಟವಾಗಿ ತಿಳಿದು ಬರುವ ವಿಷಯವೆಂದರೆ ಮೆದುಳಿನ ನಿರ್ದಿಷ್ಟ ಭಾಗಗಳ ಕ್ರಿಯಾಶೀಲತೆಯೇ ಭಾಷೆಯ ಗಳಿಕೆ ಗ್ರಹಿಕೆಗಳಿಗೆ ಅವಕಾಶ ನೀಡುತ್ತದೆ.

ಭಾಷೆಗೆ ಸಂಬಂಧಪಟ್ಟಂತೆ ಮಾನವನ ಮೆದುಳು ಮಸ್ತಿಷ್ಕ ಪದರಗಳನ್ನು ಹೊಂದಿದೆ. ಇದು ಎರಡೂ ಅರ್ಧಗೋಳಗಳಿಂದ ಕೂಡಿದ್ದರೂ ಪರಸ್ಪರ ಸಮಾಕಾರವಲ್ಲ. ಶೇಕಡ ೮೫% ರಷ್ಟು ಜನರು ಬಲಗೈಯಲ್ಲಿ ಬರೆಯುವ ಅಭ್ಯಾಸವನ್ನು ಹೊಂದಿದ್ದು ಸಾಮಾನ್ಯವಾಗಿ ಎಲ್ಲರೂ ತಮ್ಮ ಭಾಷಾ ಪ್ರಕ್ರಿಯೆಗಳನ್ನು ಮೆದುಳಿನ ಎಡಭಾಗದ ನರಮಂಡಲ ವ್ಯವಸ್ಥೆಯಲ್ಲಿ ಹೊಂದಿರುತ್ತಾರೆ. ಎಡಗೈ ಬರಹಗಾರರೂ ಸಹ ಎಡಭಾಗದ ನರವ್ಯವಸ್ಥೆಯಲ್ಲಿಯೇ ಭಾಷಾ ಪ್ರಕ್ರಿಯೆಯನ್ನು ಹೊಂದಿರುತ್ತಾರೆ. ಆದರೂ ಭಾಷಾ ಪ್ರಕ್ರಿಯೆಯ ಕೆಲವು ಅಂಶಗಳಲ್ಲಿ ಮೆದುಳಿನ ಬಲಭಾಗವೂ ಸಹಾಯವಾಗುತ್ತದೆ. ಮೆದುಳಿನ ಎಡಭಾಗದಲ್ಲಿ ಭಾಷಾ ಸಂಬಂಧಿ ಭಾಗಗಳನ್ನು ನಾವು ಕಾಣಬಹುದು. ಬ್ರೋಕಾನ ಪ್ರದೇಶವು ನರಮಂಡಲ ಚಾಲಕಪಟ್ಟಿಯ ಅಡಿಯಲ್ಲಿದ್ದು ಭಾಷೆಯನ್ನು ಗ್ರಹಿಸಿ ಉಚ್ಚರಿಸುವ ಕಾರ್ಯವನ್ನು ಮಾಡುತ್ತದೆ. ಶ್ರವಣ ಮಸ್ತಿಷ್ಕಕ್ಕೆ ಹೊಂದಿಕೊಂಡಂತಿರುವ ವರ್ನಿಕ ಪ್ರದೇಶವು ಕೇಳಿದ ಭಾಷೆಯನ್ನು ಸಮಗ್ರಗೊಳಿಸುವಲ್ಲಿ ಸಹಾಯಕವಾಗುತ್ತದೆ. ಕೇಳಿದ ಪದವನ್ನು ಪುನರ್ ಉಚ್ಚರಿಸಲು ವರ್ನಿಕ ಪ್ರದೇಶದ ನರಗಳು ಸಹಾಯ ಮಾಡಿ ಬ್ರೋಕಾ ಪ್ರದೇಶದ ನರಗಳ ಮೂಲಕ ಆ ಶಬ್ದವನ್ನು ಪ್ರತಿನಿಧಿಗೊಳಿಸಿ ಉಚ್ಚರಿಸಲು ಸಹಾಯ ಮಾಡುತ್ತವೆ. ಮೆದುಳಿನ ಎಡ ಮುಂಭಾಗದ ಬ್ರೋಕಾ ಪ್ರದೇಶವು ತನ್ನ ಪ್ರೇರಕಪಟ್ಟಿಯ ಮುಖಾಂತರ ನಾಲಿಗೆ ಮತ್ತು ತುಟಿಯನ್ನು ನಿಯಂತ್ರಿಸುತ್ತದೆ. ಇದರಲ್ಲಿ ಉಂಟಾಗುವ ಅಡಚಣೆಯು ವ್ಯಕ್ತಿಯಲ್ಲಿ ಮಾತು ನಿಂತು ಹೋಗುವ

ಅಥವಾ ಭಾಷೆ ಅರ್ಥವಾಗದಿರುವ ತೊಂದರೆಯನ್ನು 'ಬ್ರೋಕಾಸ್ ಅಫೇಸಿಯಾ' ಎನ್ನುತ್ತಾರೆ. ಬೆಳವಣಿಗೆಯ ಪ್ರಾರಂಭದ ಹಂತದಲ್ಲಿರುವ ಮಕ್ಕಳು (ಟೆಲಿಗ್ರಾಫ್) ತಂತಿ ಸಂದೇಶಗಳಂತೆ ಅತಿ ಸಂಕ್ಷಿಪ್ತವಾಗಿ ಮಾತನಾಡುತ್ತಾರೆ (ಉದಾ: ಆ ಮೇಲೆ, ಆ ಮನೆ, ಈ ಮನೆ) ಬ್ರೋಕಾಸ್ ಅಫೇಸಿಯಾ ಎನ್ನುವುದು ದೊಡ್ಡವರಲ್ಲಿ ಒಂದು ಅಸ್ವಸ್ಥತೆಯಾದರೆ ಮಕ್ಕಳಲ್ಲಿ ಇದು ಬೆಳವಣಿಗೆಯ ಹಂತದಲ್ಲಿರುವುದರಿಂದ ಇದರ ಪೂರ್ವ ಸ್ಥಿತಿ ಎಂದು ಭಾವಿಸಬಹುದು. ಮಕ್ಕಳು ಬೆಳೆದಂತೆ ಶರೀರದೊಂದಿಗೆ ನರಮಂಡಲಗಳು ದೃಢವಾದಂತೆ ಮಕ್ಕಳಲ್ಲಿನ ಭಾಷಾ ಬಳಕೆಯಲ್ಲಿ ಈ ವ್ಯಾಕರಣಾಂಶಗಳ ಬೆಳವಣಿಗೆಯನ್ನು ಗಮನಿಸಬಹುದು.

ಇದೇ ರೀತಿಯಾಗಿ ವರ್ನಿಕ್ ಪ್ರದೇಶದಲ್ಲಿ ಉಂಟಾಗುವ ವ್ಯತ್ಯಾಸಗಳಿಂದ ನಿರರ್ಗಳ ಮಾತುಗಳನ್ನು ಆಡುವುದನ್ನು ಗಮನಿಸಬಹುದು. ಆದರೆ ಈ ತೊಂದರೆಗೆ ಒಳಗಾದವರು ತಾವು ಆಡುವ ಮಾತುಗಳ ಅರ್ಥವನ್ನು ತಿಳಿದಿರುವುದಿಲ್ಲ. ಅವರ ವಾಕ್ಯಗಳು ನಿಯಮಬದ್ಧವಾಗಿದ್ದರೂ ಅವುಗಳಿಗೆ ಸ್ಪಷ್ಟ ಅರ್ಥ ಇರುವುದಿಲ್ಲ. ಇಂತಹ ಸಂದರ್ಭದಲ್ಲಿ ಪದಗಳ ಮತ್ತು ಅವಕ್ಕೆ ಸಂಬಂಧಪಟ್ಟ ವಸ್ತುಗಳ ಸ್ಪಷ್ಟ ಪರಿಕಲ್ಪನೆ ಮಕ್ಕಳಲ್ಲಿರುವುದಿಲ್ಲ.

**೨.೨. ಭಾಷೆಯ ಜೀವಶಾಸ್ತ್ರೀಯ ಲಕ್ಷಣಗಳು**

ತಲೆಬುರುಡೆಯ ಎಡಪಕ್ಕದ ಗೋಳಾರ್ಧದಲ್ಲಿ ಭಾಷಾಭಿವ್ಯಕ್ತಿಗೆ ಸಂಬಂಧಿಸಿದ ವರ್ನಿಕ್ ಮತ್ತು ಬ್ರೋಕಾನ ಪ್ರದೇಶಗಳು ನರಮಾರ್ಗಗಳನ್ನು ಹೊಂದಿವೆ. ಇವುಗಳ ಸಂಪರ್ಕ ಭಾಗಗಳು ಭಾಷೆಯ ಉತ್ಪತ್ತಿ ಮತ್ತು ಅರ್ಥಗ್ರಹಿಕೆಗೆ ಸಹಾಯವಾಗುತ್ತವೆ. ಮೆದುಳು ಗುಂಗುರುನಿಂದ ಗೂಡಿದ ಗುಚ್ಚವಾಗಿದ್ದು, ತಲೆಬುರುಡೆಯ ಎರಡೂ ಪಕ್ಕದ ಜೋಡಿ ಎಲುಬುಗಳು ಹಿಂಭಾಗವನ್ನು ಮುಂಭಾಗದ ಮೆದುಳಿನ ತೊಗಟೆಯೊಂದಿಗೆ ಕೂಡಿಸುವ ಅಂಗವಾಗಿದೆ.

**ಚಾಲಕ ವಲಯಗಳು (ಮೋಟಾರ್ ಏರಿಯಾಸ್) :** ನರಮಂಡಲದ ಚಾಲಕ ವಲಯಗಳು ಮಸ್ತಿಷ್ಕ ತೊಗಟೆಯ ಎರಡೂ ಗೋಳಾರ್ಧಗಳಲ್ಲಿ ಹರಡಿಕೊಂಡಿವೆ. ಇವು ಭಾಷೆಯ ಬಳಕೆಯಲ್ಲಿ ಶರೀರದ ಅಂಗಗಳಾದ ಬಾಯಿ ಮತ್ತು ಗಂಟಲನ್ನು ಸಕ್ರಮವಾಗಿ ಚಲಿಸುವಲ್ಲಿ ಚಾಲಕಶಕ್ತಿಯಾಗಿ ಕೆಲಸ ಮಾಡುತ್ತವೆ. ಈ ಚಾಲಕ ವಲಯದ ಬಲ ಅರ್ಧಭಾಗವು ಶರೀರದ ಎಡಭಾಗವನ್ನು ಮತ್ತು ಎಡ ವಲಯವು ಶರೀರದ ಬಲಭಾಗವನ್ನು ನಿಯಂತ್ರಿಸುವಲ್ಲಿ ಸಹಾಯ ಮಾಡುತ್ತವೆ. ಮೆದುಳಿನ ತೊಗಟೆಯು ಹೆಚ್ಚು ದಪ್ಪವಿದ್ದಷ್ಟು ಬೌದ್ಧಿಕ ಸಾಮರ್ಥ್ಯ ಕಡಿಮೆಯೆಂದು ಹೆಚ್ಚು ತೆಳುವಿದ್ದಷ್ಟು ಬೌದ್ಧಿಕ ಸಾಮರ್ಥ್ಯ ಹೆಚ್ಚೆಂದು ಜೀವಶಾಸ್ತ್ರವು ಸ್ಪಷ್ಟಗೊಳಿಸಿದೆ. ಈ ತೊಗಟೆಯ ನಿರ್ಮಾಣದಲ್ಲಿ ಉಂಟಾಗುವ ವ್ಯತ್ಯಾಸಗಳು ವಾಕ್‌ಸ್ತಂಭನವನ್ನು ಅಥವಾ ಅಸ್ಪಷ್ಟ ಮಾತುಗಳನ್ನು ಸೃಷ್ಟಿಸುತ್ತವೆ. ಈ ಅಸ್ಪಷ್ಟತೆಯಲ್ಲಿ ಭಾಷಾ ಪ್ರಸ್ತುತಿಯ ತೊಂದರೆ ನಿರರ್ಗಳತೆಯ ಅಭಾವ ಹೆಚ್ಚು ಶ್ರಮ ಮತ್ತು ಮಧ್ಯ ವಾಕ್ಯಗಳು ನಿಂತು ನಿಂತು ಬರುವುದು ಮೊದಲಾದ ಸಮಸ್ಯೆಗಳನ್ನು ಹುಟ್ಟುಹಾಕುತ್ತವೆ. ಭಾಷೆಯ ಅಸಂಯೋಜಿತ ಪದಗಳ ರೂಪಕ್ಕಿಳಿದು ವಾಕ್ಯ ರಚನೆಯು ಅಸ್ಪಷ್ಟವಾಗಿ ಪ್ರಧಾನ ಪದಗಳನ್ನೇ ಬಿಟ್ಟು ಬಿಡುವ ಸಮಸ್ಯೆಗಳನ್ನು ಹೊಂದಿರುತ್ತವೆ. ಇದನ್ನು ಅಭಿವ್ಯಕ್ತಿ ಸ್ತಂಭನ ಎಂದು ಕರೆಯಲಾಗುತ್ತದೆ. ಇವು ವಾಕ್ಯ ರಚನೆಯಲ್ಲಿನ ದೋಷಗಳನ್ನು ಉಂಟು ಮಾಡುವುದರಿಂದ ಒಂದು ವಾಕ್ಯದಲ್ಲಿನ ವ್ಯಾಕರಣ ದೋಷಗಳನ್ನು ಉಂಟು ಮಾಡುತ್ತವೆ. ಒಂದು ವಾಕ್ಯದ ನಿರ್ದಿಷ್ಟ ಭಾಗಗಳನ್ನು ಈ ನರತಂತುಗಳ ನಿರ್ದಿಷ್ಟ ನಾಡಿಯು ದುರ್ಬಲವಾಗುವುದರೊಂದಿಗೆ ಅಥವಾ ಮನಸ್ಸು ಸರಿಯಾಗಿ ಅದನ್ನು ಗ್ರಹಿಸುವುದರೊಂದಿಗೆ ಉಂಟಾಗುತ್ತದೆ. ಜೀವಶಾಸ್ತ್ರೀಯವಾಗಿ ಭಾಷೆ ಎನ್ನುವುದನ್ನು ದೃಶ್ಯ, ಶ್ರವಣ ಮತ್ತು ಬೌದ್ಧಿಕ

ಸಾಮರ್ಥ್ಯದ ಪರಿವರ್ತನಶೀಲ ಸಂಕೇತಗಳೆಂದು ತಿಳಿಯಲಾಗಿದೆ. ಮಾನವೀಯ ಸಂವಹನ ಪ್ರಧಾನ ವಿಧಾನವೆಂದು ಭಾವಿಸಲಾಗಿದೆ. ಒಪ್ಪಿತವಾದ ನಿರ್ದಿಷ್ಟ ಸಂಕೇತಗಳ ಸಂಕೀರ್ಣವನ್ನು ಭಾಷೆ ಎನ್ನಲಾಗಿದೆ. ಅದನ್ನು ಕ್ರಮಬದ್ಧವಾಗಿ ಪರಸ್ಪರ ಪದಗಳ ಸರಿಯಾದ ಅರ್ಥ ಜೋಡಣೆಯ ರೂಪವನ್ನು ವ್ಯಾಕರಣ ಎಂದು ಕರೆಯಲಾಗಿದೆ. ಭಾಷಾ ಸಂಕೇತಗಳು ಸ್ವಯಂ ಅಭಿವ್ಯಕ್ತ ಎನ್ನುವುದು ಇದರ ಮತ್ತೊಂದು ಲಕ್ಷಣ. ಈ ಸಂಕೇತಗಳು ಒಂದು ಪರಿಕಲ್ಪನೆ ಮತ್ತು ವ್ಯಾಕರಣ ನಿಯಮವನ್ನು ತಾನೇ ಹೊಂದಿಸಿಕೊಳ್ಳುತ್ತದೆ.

(www.en.wikipedia.org/wiki/language acquisition)

### ೨.೩. ಮಾನವ ಭಾಷೆಗಳು ಸ್ವಾಭಾವಿಕ ಭಾಷೆಗಳು (ಹ್ಯೂಮನ್ ಲ್ಯಾಂಗ್ವೇಜಸ್-ನ್ಯಾಚುರಲ್ ಲ್ಯಾಂಗ್ವೇಜಸ್)

ಮಾನವೀಯ ಭಾಷೆಗಳು ಸ್ವಾಭಾವಿಕ ಭಾಷೆಗಳೆಂದು ಗುರುತಿಸಲಾಗಿದ್ದು, ಅವುಗಳನ್ನು ಅಧ್ಯಯನ ಮಾಡುವ ಶಾಸ್ತ್ರವನ್ನು ಭಾಷಾಶಾಸ್ತ್ರ ಎಂದು ಕರೆಯಲಾಗಿದೆ. ಈ ಸ್ವಾಭಾವಿಕ ಭಾಷೆಗಳ ಸಾಮಾನ್ಯ ವಿಕಾಸವು ಆಡುಭಾಷೆ, ಗ್ರಾಂಥಿಕ ಭಾಷೆ (ಲಿಖಿತ ರೂಪ) ಮತ್ತು ಇವುಗಳ ನಂತರ ಅರ್ಥೈಸಿಕೊಳ್ಳುವಿಕೆ ಮತ್ತು ಅವುಗಳ ವ್ಯಾಕರಣವನ್ನು ವಿವರಿಸುವ ಕ್ರಿಯೆ ನಡೆದಿದೆ. ಕಿವಿಯ ಹಿಂಭಾಗದ ಮೇಲ್ತುದಿಯಿಂದ ಕೆಳಗೆ ಶರೀರದ ವಿರುದ್ಧ ದಿಕ್ಕುಗಳಲ್ಲಿ ಹರಡಿರುವ ( ೭ನೇ ನರ್ವ್) ೭ನೆಯ ನರವ್ಯೂಹವು ಸಾಮಾನ್ಯವಾಗಿ ಭಾಷೆಯ ಸರಿಯಾದ ಬಳಕೆಗೆ ಪ್ರೇರಣೆಯನ್ನು ನೀಡುತ್ತದೆ. ಆಯಾ ಪ್ರದೇಶಗಳ ಆಯಾ ಭಾಷಾ ಪ್ರಬೇಧವನ್ನು ಆಯಾ ಪ್ರದೇಶದಲ್ಲಿ ಹುಟ್ಟಿದ ಮಕ್ಕಳು ಮೊದಲು ಕೇಳಿಸಿಕೊಳ್ಳುವುದರ ಮೂಲಕ ಪಡೆದು ಅದನ್ನೇ ಮುಂದೆ ಪ್ರಮಾಣಿತ ಭಾಷೆಯನ್ನಾಗಿ ಸ್ವೀಕರಿಸುವುದರಿಂದ ಭಾಷಾಶಾಸ್ತ್ರವು ಎಲ್ಲಾ ಭಾಷಾ ಪ್ರಬೇಧಗಳನ್ನು ಸಮಾನ ಗೌರವದಿಂದ ಭಾವಿಸುತ್ತದೆ. ಏಕೆಂದರೆ ಪರಿಕಲ್ಪನೆ ಮತ್ತು ಅರ್ಥಗ್ರಹಿಕೆಯಲ್ಲಿ ಪದೋಚ್ಚಾರಣೆ ಭೇದವು ಯಾವುದೇ ಆತಂಕವನ್ನು ಉಂಟು ಮಾಡುವುದಿಲ್ಲ. ಇದು ಪ್ರತಿಯೊಬ್ಬ ಮನುಷ್ಯನಿಗೂ ಸ್ವಾಭಾವಿಕವಾಗಿ ಬರುವುದರಿಂದ ಇವುಗಳನ್ನು ಸ್ವಾಭಾವಿಕ ಭಾಷೆ ಎಂದು ಕರೆಯಲಾಗಿದೆ.

ಬಾಲ್ಯದಲ್ಲಿ ಮಗುವು ಪಡೆದ ಈ ಭಾಷೆಯು ತನ್ನದೇ ಆದ ವ್ಯಾಕರಣ ರೂಪವನ್ನು ಹೊಂದಿರುತ್ತದೆ. ಕಲಿಕೆಯ ನಂತರ ಅವು ತನ್ನ ವ್ಯಾಕರಣವನ್ನು ಮತ್ತು ಭಾಷೆಯನ್ನು ಕೃತ್ರಿಮಗೊಳಿಸಿಕೊಳ್ಳುತ್ತಾ ಹೋಗುತ್ತದೆ. ಇದನ್ನು ಕೃತ್ರಿಮ ಭಾಷೆ ಅಥವಾ ರಚಿತ ಭಾಷೆ ಎಂದು ಕರೆಯಲಾಗುತ್ತದೆ.

ಮೆದುಳಿನ ಎಡಭಾಗದ ಅಡಿಭಾಗದಲ್ಲಿ ಇರುವ 'ಪಾರ್ಸ್ ಟ್ರ್ಯಾಂಗುಲರೀಸ್' (ಇದು ಬ್ರೋಕಾಸ್ ವಲಯದ ಒಂದು ಭಾಗ) ಎನ್ನುವ ಮುಚ್ಚು ಭಾಗಗಳು ಭಾಷಾ ಅಂತರ್ಜಾಲದ ವಲಯೀಕರಣವನ್ನು ಮೆದುಳಿನಲ್ಲಿ ಮೂಡಿಸುತ್ತದೆ. ಇದು ಭಾಷಾ ಪ್ರಕ್ರಿಯೆಯಲ್ಲಿನ ಸಾಂಜ್ಞಿಕ ಭಾವಗಳನ್ನು ಒಳಮೂಡಿಸುತ್ತದೆ. ಇದು ತನ್ನೊಳಗೆ ಭಾಷೆಯ ವಿವಿಧ ಭಾಗಗಳನ್ನು ವ್ಯವಸ್ಥಿತಗೊಳಿಸುವಲ್ಲಿ ಮತ್ತು ವಿವಿಧ ವಲಯಗಳಲ್ಲಿ ಕ್ರಿಯಾಶೀಲವಾಗುವಂತೆ ಮಾಡುತ್ತದೆ. ಸಾಮಾನ್ಯವಾಗಿ ಬೆಳೆಯುವ ಮಕ್ಕಳಲ್ಲಿ ಇದು ಇನ್ನೂ ಶೈಶವ ಹಂತವನ್ನು ಪಡೆಯುವುದರಿಂದ ಒಟ್ಟಾರೆ ವಾಕ್ಯವು ಅವರಿಂದ ಸರಿಯಾಗಿ ನುಡಿಯದಂತೆ ಮಾಡುತ್ತದೆ. ಪಾರ್ಸ್ ಟ್ರ್ಯಾಂಗುಲರೀಸ್ ಅಥವಾ ಸಂಕ್ಷಿಪ್ತವಾಗಿ ಪಿ.ಟಿ. ಎಂದು ಕರೆಯುವ ಈ ಭಾಗವು ಕಾಗುಣಿತಗಳ ಉಚ್ಚಾರಣೆಗಳನ್ನು ನಿಯಂತ್ರಿಸಿಕೊಡುತ್ತದೆ. ಅಪರೂಪದ ಶಬ್ದಗಳನ್ನು ಕೇಳಿದಾಗ ಈ 'ಪಿ.ಟಿ.' ಹೆಚ್ಚು ಕ್ರಿಯಾಶೀಲವಾಗಿ ಮಗುವಿನಲ್ಲಿ ಕುತೂಹಲವನ್ನು ಮೂಡಿಸುತ್ತದೆ. ಆದ್ದರಿಂದ ಹುಟ್ಟಿದ

ಮಗುವು ಬೆಳೆಯತೊಡಗಿದಂತೆ ತಾನು ಕೇಳುವ ಎಲ್ಲಾ ಶಬ್ದಗಳನ್ನು ಸಂಸ್ಕರಿಸಿಕೊಡುವಲ್ಲಿ ಸಹಕಾರಿಯಾಗುತ್ತದೆ. ಭಾಷಾ ಬಳಕೆಯಲ್ಲಿ ಬ್ರೋಕಾ ವಲಯದ ವಿವಿಧ ಭಾಗಗಳು ವ್ಯಾಕರಣದ ವಿವಿಧ ಭಾಗಗಳನ್ನು ಪಿ.ಟಿ.ಯ ಸಹಾಯದಿಂದ ಸಂಸ್ಕರಿಸಿಕೊಡುತ್ತದೆ. ಈ ಪಿ.ಟಿ.ಯು ಆಲೋಚನೆಯನ್ನು ವ್ಯಾಖ್ಯೆ ಮಾಡಿ ವಾಕ್ಯವನ್ನಾಗಿಸಿ ಮೌಖಿಕ ವರ್ತನೆಗಳಿಗೆ ಪ್ರೇರಣೆಯನ್ನು ನೀಡುತ್ತದೆ. ಭಾಷೆಯ ಆಂತರಿಕ ಪರಿಕಲ್ಪನೆಯನ್ನು ಭಾಷಿಕ ಅಂಗಗಳೊಂದಿಗೆ ಸಂಘಟಿಸಿ ಚಾಲಕ ನರಗಳ ಸಹಾಯದಿಂದ ಭಾಷಾರೂಪವಾಗಿ ಹೊರಹೊಮ್ಮಲು ಸಹಾಯ ಮಾಡುತ್ತದೆ.

(www.en.wikipedia.org/wiki/language acquisition)

ಅಧ್ಯಾಯ-೩

# ಮಕ್ಕಳು ಭಾಷಾ ಸಾಮರ್ಥ್ಯವನ್ನು ಪಡೆದುಕೊಳ್ಳುವ ಬಗೆ

ಭಾಷಾ ಕಲಿಕೆಯು ಇತರ ಕಲಿಕೆಗಳಿಗಿಂತ ಭಿನ್ನವಾಗಿದ್ದು, ಭಾಷಾ ಗಳಿಕೆ ಅಥವಾ ಪಡೆದುಕೊಳ್ಳುವಿಕೆ ಎನ್ನಬಹುದಾಗಿದೆ. ಪ್ರಥಮ ಭಾಷೆ ಮಕ್ಕಳಲ್ಲಿ ಮುಖ್ಯವಾಗಿರುತ್ತದೆ. ಇತರ ಭಾಷೆಗಳನ್ನು ಪ್ರಥಮ ಭಾಷೆಯ ಅವಧಿಯಲ್ಲೇ ಸಹಜವಾಗಿ ಮಗು ಪಡೆದುಕೊಳ್ಳಬಲ್ಲದು. ಅದಕ್ಕೆ ಪ್ರೇರಣೆ ಇರಬೇಕು ಅಷ್ಟೆ. ಮಕ್ಕಳ ಭಾಷಾ ಕಲಿಕೆಯ ಬಗ್ಗೆ ಚಾರಿತ್ರಿಕವಾಗಿ ಸೈದ್ಧಾಂತಿಕರು ಸಹಜತೆ (ನೇಚರ್) ಮತ್ತು ಪೋಷಕತೆ (ನರಷರ್) ಎನ್ನುವ ಎರಡು ವಾದಗಳಲ್ಲಿ ತೊಡಗಿರುವುದು ಕಂಡುಬರುತ್ತದೆ.

**ಅನುಕರಣಾ ಸಿದ್ಧಾಂತ:** ಅನುಕರಣೆ ಮಾನವನ ಸಹಜ ಪ್ರವೃತ್ತಿ. ಅನುಕರಣೆಯಿಂದ ಮಾನವ ಏನನ್ನು ಬೇಕಾದರೂ ಕಲಿಯಬಲ್ಲ. ಜನಿಸಿದ ಮಗುವು ತನ್ನ ತಾಯಿ-ತಂದೆಯರ, ನೆರೆಹೊರೆಯವರ, ತನ್ನ ಪರಿಸರದಲ್ಲಿರುವ ಪ್ರಾಣಿ-ಪಕ್ಷಿಗಳ ಚಲನವಲನ ಮತ್ತು ಶಬ್ದಗಳನ್ನು ಸ್ವಾಭಾವಿಕವಾಗಿ ಅನುಕರಣೆ ಮಾಡುತ್ತದೆ ಎಂದು ಸೈದ್ಧಾಂತಿಕರು ಹೇಳುತ್ತಾರೆ.

ನೋಮ್ ಚೋಮ್‌ಸ್ಕಿ ಮತ್ತು ಎರಿಕ್ ಲೆನ್‌ಬರ್ಗ್ ಮುಂತಾದವರು ಭಾಷಾ ಕಲಿಕೆಯ ಸಹಜತೆಯ ಬಗ್ಗೆ ಒತ್ತಿ ಹೇಳುತ್ತಾರೆ. ಭಾಷಾ ಗಳಿಕೆಯ ಮೂಲವು ಮಕ್ಕಳಲ್ಲಿ ಜೈವಿಕವಾದ ಅಂತರ್ಗತ ಸಾಮರ್ಥ್ಯದಿಂದ ಸಾಧ್ಯವಾಗುತ್ತದೆ ಎಂದು ಹೇಳಿದರು. ಆದರೆ ಎಲಿಜಬೆತ್ ಬೆಟ್ಸ್, ಕ್ಯಾಥೋರಿನ್ ಸ್ನೊ, ಮೈಕೆಲ್ ಟೋಮಾಸೆಲೊ ಮುಂತಾದವರು ಭಾಷಾ ಗಳಿಕೆ ಮಗುವಿನ ಇಂದ್ರಿಯ ಗ್ರಹಿಕೆಯ ಸಾಮರ್ಥ್ಯ ಮತ್ತು ಸುತ್ತಲಿನ ಪರಿಸರದ ಪ್ರಭಾವದಿಂದ ಮಾತ್ರ ಸಾಧ್ಯವಾಗುತ್ತದೆ ಎಂದು ಹೇಳುತ್ತಾರೆ.

**ಸ್ವಗುಣ ಅಥವಾ ಹುಟ್ಟು ಸಾಮರ್ಥ್ಯ (ನೇಟಿವಿಸ್ಟ್‌ಗಳ ಸಿದ್ಧಾಂತಗಳು) :** ಇವರ ಪ್ರಕಾರ ಮಗುವು ಹುಟ್ಟುತ್ತಲೇ ಭಾಷೆ ಕಲಿಯುವ ಸಾಮರ್ಥ್ಯವನ್ನು ಸಹಜವಾಗಿಯೇ ಹೊಂದಿರುತ್ತದೆ. ಅದರ ಜೈವಿಕ ರಚನೆಯಲ್ಲಿಯೇ ಅದು ಅಂತರ್ಗತವಾಗಿರುತ್ತದೆ. ಡಾಲ್ಫಿನ್‌ಗಳಿಗೆ ಈಜುವಿಕೆ, ಹಾರುವ ಹಕ್ಕಿಗಳಿಗೆ ಹಾರುವಿಕೆ ಹೇಗೆ ಸಹಜವೋ ಹಾಗೆಯೇ ಮಾನವರಿಗೆ ಭಾಷೆಯು ಸಹಜವಾದ ಗುಣ. ಮಾನವನು ಮಾತಾಡುವ ಪ್ರಾಣಿ ಎನಿಸುವುದು ಹೀಗೆ. ಚೋಮ್‌ಸ್ಕಿಯು ಇದಕ್ಕೊಂದು ಸಿದ್ಧಾಂತ ರೂಪವನ್ನು ಕೊಟ್ಟು ಭಾಷಾ ಗಳಿಕೆಯ ಸಾಧನ ಲ್ಯಾಡ್ (ಎಲ್.ಎ.ಡಿ.-ಲಾಂಗ್ವೇಜ್ ಅಕ್ವೈರಿಂಗ್ ಡಿವೈಸ್) ಎಂದು ಹೆಸರಿಸಿದ. ಅದು ಮಕ್ಕಳ ಮೆದುಳಿನಲ್ಲಿ ಸಹಜವಾಗಿ ಹುಟ್ಟಿನಿಂದಲೇ ಬಂದಿರುವ ವಿನ್ಯಾಸವೆಂದೂ, ವಿಶ್ವದ ಮಾನವ ಶಿಶುಗಳಲ್ಲಿ ಭಾಷೆಯನ್ನು ಪಡೆದುಕೊಳ್ಳುವ ಮೂಲ ದ್ರವ್ಯವಾಗಿರುತ್ತದೆಂದೂ, ಅದಕ್ಕೆ 'ವೈಶ್ವಿಕ ವ್ಯಾಕರಣ' (ಯೂನಿವರ್ಸಲ್ ಗ್ರಾಮರ್) ಎಂದು ಹೆಸರಿಸಿದ. ಚೋಮ್‌ಸ್ಕಿ ಈ ಸಿದ್ಧಾಂತವನ್ನು ರೂಪಿಸಿ ಮೂಲಭಾಷೆಯ ಪರಿಕರಗಳ ಆಧಾರದ ಮೇಲೆ ಆ ಭಾಷೆಯ ವ್ಯಾಕರಣವನ್ನು ಕಂಡುಕೊಳ್ಳುವ ವಿಧಾನವನ್ನು ಕಂಡುಕೊಂಡ. ವಾಕ್ಯಗಳ ರಚನಾ ಸ್ವರೂಪದ ಆಧಾರದ ಮೇಲೆ ಭಾಷೆಯನ್ನು ವಿಶ್ಲೇಷಿಸುವ ಬದಲು ಮಕ್ಕಳು ಭಾಷೆಯನ್ನು ಪಡೆದುಕೊಳ್ಳುವ ಮತ್ತು ಬಳಸುವ ರೀತಿಗಳ ಆಧಾರದ ಮೇಲೆ ವಿಶ್ವದ ಭಾಷೆಗಳ ಮೂಲ ಸ್ವರೂಪವನ್ನು ಗುರುತಿಸುವ ಪ್ರಯತ್ನ ಮಾಡಿದ. ಅದನ್ನೇ 'ವೈಶ್ವಿಕ ವ್ಯಾಕರಣ' ಎಂದು ಕರೆದ. 'ಮ್ಯಾಕ್ ನೀಲ್' ಈ ವಿಧಾನವನ್ನು ಭಾಷೆಯ ಮೂಲ ಅಂಶಗಳು ಮತ್ತು ಭಾಷೆಯ ಪರಿವರ್ತನಾತ್ಮಕ ಅಂಶಗಳು ಎಂದು ವಿಂಗಡಿಸಿದ. ಮೂಲ ಅಂಶಗಳು (ಬೇಸ್

ಕಾಂಪೋನೆಂಟ್ಸ್) ವಿಶ್ವ ಸಾಮಾನ್ಯ ವೈಶಿಷ್ಟ್ಯವನ್ನು ಹೊಂದಿದ್ದು, ಹುಟ್ಟುಗುಣದಂತೆ ಇರುತ್ತದೆ. ಅವುಗಳ ಪರಿವರ್ತನೆಗಳನ್ನು ಕಂಡುಕೊಳ್ಳುತ್ತ ಒಂದು ಭಾಷೆಯ ರೂಪವನ್ನು ಕಂಡುಕೊಳ್ಳಲು ಸಾಧ್ಯವಾಗುತ್ತದೆ.

| | ಭಾಷೆ |
|---|---|
| ಮೂಲ ಅಂಶಗಳು | ಪರಿವರ್ತನಾತ್ಮಕ ಅಂಶಗಳು |
| ಬೇಸ್ ಕಾಂಪೋನೆಂಟ್ಸ್ | ಟ್ರಾನ್ಸ್‌ಫಾರ್ಮೇಷನ್ ಕಾಂಪೋನೆಂಟ್ಸ್ |
| ವೈಶ್ವಿಕ ಮೂಲದ ತಿಳುವಳಿಕೆ | ಮಗುವು ಪರಿಸರದ ಕೊಡುಕೊಳ್ಳುವಿಕೆಯಿಂದ ತನ್ನ ಭಾಷೆಯನ್ನು ಅರಿಯುತ್ತದೆ. |

**ಗ್ರಹಿಕೆಯ ಸಿದ್ಧಾಂತಗಳು (ಕಾಗ್ನೆಟಿವ್ ಥೇರೀಸ್) :** ಕಲಿಯುವಿಕೆಯು ಮಗುವಿನ ಬೆಳವಣಿಗೆಯನ್ನು ಅನುಸರಿಸುತ್ತದೆ ಎನ್ನುವ ಆಧಾರದ ಮೇಲೆ ಈ ಸಿದ್ಧಾಂತಗಳಿವೆ. ಇದರ ಪ್ರಕಾರ ಮಾನವನ ಕಲಿಕೆಯಲ್ಲಿನ ಅರ್ಥವು ಬಹಳ ಮುಖ್ಯವಾಗಿರುತ್ತದೆ. ಹಿಂದಿನ ಗ್ರಹಿಕೆಗಳನ್ನು ಹೊಸ ಘಟನೆ, ವಿಷಯಗಳೊಡನೆ ಜೋಡಿಸುವುದರ ಮೂಲಕ ಅರ್ಥಪೂರ್ಣ ಕಲಿಕೆ ಉಂಟಾಗುತ್ತದೆ. ಸಾಮಾಜಿಕ ಸಂಬಂಧಗಳು ಮತ್ತು ಅರ್ಥಗ್ರಹಿಕೆಗಳು ಒಂದಕ್ಕೊಂದು ಪ್ರಭಾವಗೊಳಿಸುತ್ತವೆ. ಭಾಷೆಯ ಬಗ್ಗೆ ತಿಳುವಳಿಕೆಯು ಸುತ್ತಲಿನ ಪರಿಸರದ ಪರಿಚಯಗಳು ಭಾಷಾ ಕಲಿಕೆಯಲ್ಲಿ ಪರಸ್ಪರ ಪೂರಕವಾಗುತ್ತವೆ.

**ಜೀನ್ ಪಿಯಾಜೆಟ್‌ನ ದೃಷ್ಟಿ:** ಈತನ ಪ್ರಕಾರ ಭಾಷೆಯ ಬೆಳವಣಿಗೆಗೆ ಆಲೋಚನೆ ಬಹಳ ಮುಖ್ಯ. ಶೈಶವದಲ್ಲಿ ಭಾಷೆಗಿಂತ ಮೊದಲು ಆಲೋಚನೆಗಳ ತತ್ವಗಳು ಕಂಡುಬರುತ್ತವೆ. ಭಾಷೆಯೊಡನೆ ಅನುಕರಣೆ, ಸಾಂಕೇತಿಕ ಆಟಗಳು, ಮಾನಸಿಕ ಕಲ್ಪಕತೆ ಇತ್ಯಾದಿಗಳೂ ಇರುತ್ತವೆ. ಬಾಲ್ಯದಲ್ಲಿ ಕಾರ್ಯಕಾರಣ ಸಾಮರ್ಥ್ಯವು ಭಾಷೆಯನ್ನು ಅವಲಂಬಿಸಿರುವುದಿಲ್ಲ. ಅರ್ಥಗ್ರಹಿಕೆಯ ಫಲರೂಪವಾದ ಸಂವಹನ ರೂಪದಲ್ಲಿ ಮಗುವಿನ ಮಾತು ಇರುತ್ತದೆ. ಮಗುವಿನ ಭಾಷೆ ತನ್ನ ಸ್ವಂತಿಕೆ ಮತ್ತು ಸಾಮಾಜಿಕ ಸ್ವರೂಪಗಳಿಂದ ನಿರ್ಧರಿತವಾಗುತ್ತವೆ.

**ವೈಗೋಟವಸ್ಕಿಯ ಸಿದ್ಧಾಂತ (ಆಲೋಚನೆ ಮತ್ತು ಭಾಷೆ) :** ಚಿಂಪಾಂಜಿಗಳು ಭಾಷೆಯಿಲ್ಲದೆ ಆಲೋಚಿಸುತ್ತವೆ. ಗಿಳಿಗಳು ಆಲೋಚನೆಯಿಲ್ಲದೆ ಭಾಷೆಯನ್ನು ಬಳಸುತ್ತವೆ. ಸುಮಾರು ಎರಡು ವರ್ಷದ ವಯಸ್ಸಿನ ಮಗುವಿನಲ್ಲಿ ಇವೆರಡೂ ಕೂಡುತ್ತವೆ. ಆಲೋಚನೆಯು ಭಾಷೆಯೊಡನೆ ಸೇರಿ ಶಾಬ್ದಿಕ ಆಲೋಚನೆ ಪ್ರಾರಂಭವಾಗುತ್ತದೆ.

**ವರ್ತನಾವಾದ ಸಿದ್ಧಾಂತಗಳು:** ಇವರ ಪ್ರಕಾರ ಭಾಷೆಯ ಕಲಿಕೆಯು ಕೆಲವು ರೂಢಿಗಳ ಮೊತ್ತದಿಂದಾಗುತ್ತದೆ. ಕಲಿಯುವಿಕೆಯು ಹುಟ್ಟುಗುಣದಿಂದ ಬರುವುದಿಲ್ಲ. ಅದು ಪರಿಸರದ ಪ್ರಚೋದಕ (ಸ್ಟಿಮುಲೆಸ್‌ಗಳಿಂದ ವ್ಯಕ್ತಿಯಲ್ಲಿ ಉಂಟಾಗುವ ಪ್ರತಿಕ್ರಿಯೆ (ರೆಸ್‌ಪಾನ್ಸ್) ಗಳ ಮೂಲಕವಾಗಿ ಬೆಳೆಯುತ್ತದೆ. ಒಂದೇ ಬಗೆಯ ಪ್ರಚೋದನೆ, ಪ್ರತಿಕ್ರಿಯೆಗಳು ಒಟ್ಟುಗೂಡಿ ರೂಢಿಗತವಾಗಿ ಕೆಲವು ವರ್ತನೆಗಳು ಮಾನವನಲ್ಲಿ ಬೇರೂರುತ್ತವೆ. ಭಾಷೆಯ ಕಲಿಕೆಯೂ ಹೀಗೆಯೇ ವ್ಯಕ್ತಿ ಪರಿಸರಗಳ ಸಂಪರ್ಕದಲ್ಲಿಯೇ ಉಂಟಾಗುತ್ತವೆ.

**ಸ್ಕಿನ್ನರ್‌ನ ಶಾಬ್ದಿಕ ವರ್ತನೆಯ (ವರ್ಬಲ್ ಬಿಹೇವಿಯರ್) ಸಿದ್ಧಾಂತ (೧೯೫೭):** ಈ ಸಿದ್ಧಾಂತವು ಭಾಷೆಯ ಕಲಿಕೆಯು ಪರಿಸರದ ಪ್ರಭಾವದಿಂದಲೇ ಸಾಧ್ಯವೆನ್ನುತ್ತದೆ. ಸುತ್ತಲಿನವರ ಮಾತುಗಳು ಮತ್ತು ಅವುಗಳ ಪುನರಾವರ್ತನೆ ಮತ್ತು ಅನುಕರಣೆಗಳು ಭಾಷೆಯು ಅಳವಡಲು ನೆರವಾಗುತ್ತವೆ.

ಪ್ರಸ್ತುತ ಅಧ್ಯಯನದಲ್ಲಿ ನೇಟಿವಿಸ್ಟ್‌ಗಳ ಸಿದ್ಧಾಂತವನ್ನು ಆಧಾರ ಸಿದ್ಧಾಂತವನ್ನಾಗಿ ಇರಿಸಿಕೊಳ್ಳಲಾಗಿದೆ. ಈ ಪ್ರಕಾರ ಜನ್ಮಜಾತವಾದ ಭಾಷಾ ಸಾಮರ್ಥ್ಯವನ್ನು (ಯು.ಜಿ.) 'ವೈಶ್ವಿಕ' ವ್ಯಾಕರಣ ಎಂದು ಕಲ್ಪಿಸಿಕೊಳ್ಳಲಾಗಿದೆ. ಇದು ಯಾವುದೇ ಭಾಷೆಯನ್ನು ಪ್ರತಿನಿಧಿಸುವುದಿಲ್ಲ. ವಿಶ್ವದ ಮಾನವ ಶಿಶುಗಳಲ್ಲಿ ಭಾಷೆಯನ್ನು ಪಡೆದುಕೊಳ್ಳುವ ಮೂಲ ದ್ರವ್ಯವಾಗಿರುತ್ತದೆ. ಯಾವುದೇ ಭಾಷೆಯಾಗಿ ಪರಿವರ್ತಿತವಾಗಬಲ್ಲ ಮೂಲವಸ್ತು. ಜಗತ್ತಿನಲ್ಲಿ ಬಂದಿರುವ ಭಾಷೆಗಳಲ್ಲೆಲ್ಲಾ ವಾಕ್ಯಗಳು, ಪದಗಳ, ಪದಪುಂಜಗಳ ಸರಣಿಯಾಗಿರುವುದು ಕಂಡುಬರುತ್ತದೆ. ಇದು ಒಂದು ನಿಯಮ. ಈ ಪದಗಳಲ್ಲಿ ವಿಷಯ (ಎಸ್) ಅನುಭೋಗಿ (ಓ) ಕ್ರಿಯಾಪದ (ವಿ) ಗಳೆಂಬ ಭೇದಗಳಿವೆ. ಈ ಮೂರು ಯಾವ ಕ್ರಮದಲ್ಲಿ ಬರಬೇಕು ಎಂಬುದು ಪ್ರತಿಭಾಷೆಗೂ ನಿಯತವಾಗಿರುತ್ತದೆ. ಅವು ಎಸ್‌ಓವಿ, ಎಸ್‌ವಿಓ, ಓವಿಎಸ್, ವಿಎಸ್‌ಓ, ವಿಓಎಸ್ ಈ ಆರು ಸಾಧ್ಯತೆಗಳನ್ನು ಜಗತ್ತಿನ ಭಾಷೆಗಳು ಬಳಸುತ್ತವೆ. ಇವು ಮೂಲಭೂತ ನಿಯಮದ ವಿಕಲ್ಪಗಳು (ಪ್ಯಾರಮೀಟರ್ಸ್-ವಿಕಲ್ಪ ಕೆ.ವಿ.ಎನ್. ಮನುಕುಲದ ಮಾತುಗಾರ ಅಭಿನವ ಚಾತುರ್ಮಾಸಿಕ) ಈ ನಿಯಮ ಮತ್ತು ವಿಕಲ್ಪಗಳ ಸಿದ್ಧಾಂತವನ್ನು ೧೯೮೭ರಲ್ಲಿ ಚೋಮ್‌ಸ್ಕಿ ಮಂಡಿಸಿದರು. ಈ ನಿಯಮಗಳು ಆಯಾ ಭಾಷೆ ಪರಿಸರಕ್ಕೆ ತಕ್ಕಂತೆ ರೂಪುಗೊಂಡಿರುತ್ತವೆ. ಈ ವಿಕಲ್ಪಗಳನ್ನು ಆಯ್ಕೆ ಮಾಡಿಕೊಳ್ಳಲು ಮಕ್ಕಳಿಗೆ 'ಲ್ಯಾಡ್' (ಭಾಷಾ ಗಳಿಕೆಯ ಸಾಧನ) ನೆರವಾಗುತ್ತದೆ. ಈ ಮೂಲಕ ಮಕ್ಕಳು ತಾವು ಹುಟ್ಟಿದ ಮತ್ತು ಪರಿಸರದಲ್ಲಿ ಕೇಳಿಸಿಕೊಂಡ ಭಾಷೆಯ ನಿಯಮಗಳನ್ನು ಪಡೆದುಕೊಳ್ಳುತ್ತಾರೆ. ಇದರ ಸೌಲಭ್ಯ ನಿರ್ದಿಷ್ಟ ವಯೋಮಾನದವರೆಗೆ ಮಾತ್ರ ಲಭ್ಯವಿರುತ್ತದೆ. ಒಂದು ಪರಿಪೂರ್ಣ ಭಾಷೆಯಾಗಿ ನಿರ್ಮಾಣಗೊಂಡು ತದನಂತರ ಕೌಮಾರ್ಯ ಹಂತದಲ್ಲಿ ಸ್ಥಗಿತಗೊಳ್ಳುತ್ತದೆ. ಇದನ್ನು 'ಕ್ರಿಟಿಕಲ್ ಏಜ್' ಎಂದು ಗುರುತಿಸಬಹುದು. ಇದು ಪ್ರಸ್ತುತ ಅಧ್ಯಯನದ ಆಧಾರ ಸಿದ್ಧಾಂತವಾಗಿದೆ.

ಈ ಮಹಾಪ್ರಬಂಧವು "ಮಕ್ಕಳಲ್ಲಿ ವಾಕ್ಯರಚನಾ ನಿಯಮಗಳ ಬೆಳವಣಿಗೆ" ಯನ್ನು ಕುರಿತಾಗಿದೆ. ಆದ್ದರಿಂದ ಇಲ್ಲಿ ವಾಕ್ಯರಚನಾ ನಿಯಮಗಳು ಎಂಬುದನ್ನು ಸಂಕ್ಷಿಪ್ತವಾಗಿ ನೋಡಬಹುದಾಗಿದೆ. ವಾಕ್ಯದಲ್ಲಿ ಪದಗಳು, ಪದಪುಂಜಗಳು ಆಯಾ ಭಾಷೆಯ ರಚನೆಗನುಗುಣವಾಗಿ ವ್ಯವಸ್ಥಿತವಾದ ರೀತಿಯಲ್ಲಿ ಬರುತ್ತವೆ. ವಾಕ್ಯದಲ್ಲಿ ಬರುವ ಇವುಗಳು ಯಾವ ಕ್ರಮದಲ್ಲಿ ಬರಬೇಕು ಎಂದು ನಿರೂಪಿಸುವ ಮತ್ತು ನಿರ್ದೇಶಿಸುವ ಅಂಶಗಳೇ ನಿಯಮಗಳು. ವಾಕ್ಯವು ಏಕಪದ ದ್ವಿಪದ ಮತ್ತು ಬಹುಪದಗಳಿಂದ ರೂಪುಗೊಳ್ಳುತ್ತದೆ. ಇಂತಹ ವಾಕ್ಯವು ಸರಿಯಾಗಿ ಸಂವಹನಗೊಳ್ಳಬೇಕಾದರೆ ನಿರ್ದಿಷ್ಟ ನಿಯಮಗಳಿಗೆ ಒಳಪಡಬೇಕಾಗುತ್ತದೆ ಮತ್ತು ಪದಪುಂಜಗಳು ವ್ಯವಸ್ಥಿತವಾಗಿ ಸಂಯೋಜನೆಗೊಂಡಿರಬೇಕಾಗುತ್ತದೆ. ವಾಕ್ಯದಲ್ಲಿ ನಾಮಪದ ಪುಂಜ ಮತ್ತು ಕ್ರಿಯಾಪದ ಪುಂಜಗಳಿದ್ದು, ಮಗು ಯಾವುದನ್ನು ಮೊದಲು ಪಡೆದು ಬಳಸುತ್ತದೆ ಮತ್ತು ಪದಪುಂಜಗಳಲ್ಲಿ ಬರುವ ಪದಗಳ ಜೋಡಣೆ ಮಾಡಿಕೊಳ್ಳುವ ಬಗೆ ಹಾಗೂ ಎರಡು ಪದಪುಂಜಗಳ ರಾಚನಿಕ ಜೋಡಣೆ ಇವು ತುಂಬಾ ಸಂಕೀರ್ಣವಾದ ನೆಲೆ. ಇದನ್ನು ಮಕ್ಕಳು ಯಾವ ಕ್ರಮದಲ್ಲಿ ಮಾಡುತ್ತವೆ ಎಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ.

ನಿಯಮಗಳು ಅಮೂರ್ತವಾದಂತಹವು. ಅಂತಸ್ಥ ನೆಲೆಯಲ್ಲಿ ನಿಯಮಗಳನ್ನು ಆಯ್ಕೆ ಮಾಡಿಕೊಳ್ಳುವ ಮಕ್ಕಳು ಬಳಕೆಯ ಸಂದರ್ಭದಲ್ಲಿ ವಯೋಮಾನಕ್ಕೆ ಅನುಸಾರವಾಗಿ ಪ್ರಕಟಗೊಳಿಸುತ್ತಾರೆ. ಪದಗಳನ್ನು ಪದಪುಂಜಗಳನ್ನು ಜೋಡಿಸುವ ರಾಚನಿಕ ನಿಯಮ ಅಮೂರ್ತವಾಗಿದ್ದು, ಇದನ್ನು ಸೃಜನಶೀಲತೆ ಎಂದು ಕರೆಯಬಹುದಾಗಿದೆ.

## ಕ್ಷೇತ್ರ ಮಾಹಿತಿಯ ವಿಶ್ಲೇಷಣೆ

ಅಧ್ಯಯನಕ್ಕೆ ಒಂದು ವರ್ಷ ನಾಲ್ಕು ತಿಂಗಳಿನಿಂದ ೬ ವರ್ಷ ವಯೋಮಿತಿಯ ಮಕ್ಕಳನ್ನು ಆಯ್ಕೆ ಮಾಡಿಕೊಳ್ಳಲಾಗಿದ್ದು, ಕ್ಷೇತ್ರ ಕಾರ್ಯವನ್ನು ಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಆದರೆ ಮಾಹಿತಿ ವಿಶ್ಲೇಷಣೆಯಲ್ಲಿ 'ಐ' (೫ - ೫ ೧/೨) ಮತ್ತು 'ಜೆ' (೫ ೧/೨ - ೬) ಗುಂಪಿನ ಮಕ್ಕಳನ್ನು ಬಳಸಿಕೊಂಡಿಲ್ಲ ಹಾಗೂ 'ಜೆ' ಗುಂಪಿನ ಮಕ್ಕಳ ಮಾಹಿತಿಯನ್ನು ವಿವಿಧ ಶಾಲೆಗಳಲ್ಲಿ, ಮನೆಗಳಲ್ಲಿ ಸಂಗ್ರಹಿಸಲಾಗಿದೆ. ಈ ಗುಂಪಿಗೆ ಸೇರಿದ ಮಕ್ಕಳ ಮಾಹಿತಿ ಸಂಗ್ರಹಣೆಗೆ ಇಂತಿಷ್ಟೆ ಎಂದು ಸಮಯದ ಚೌಕಟ್ಟನ್ನು ನಿಗದಿಪಡಿಸಿಕೊಂಡಿರುವುದಿಲ್ಲ. ಅಲ್ಲದೆ, ಅಧ್ಯಯನಕ್ಕೆ ಎಲ್ಲಾ ಮಕ್ಕಳ ಮಾಹಿತಿ ದತ್ತಾಂಶವನ್ನು ವಿಶ್ಲೇಷಣೆಗೆ ಒಳಗು ಮಾಡಿಲ್ಲ. ಎಲ್ಲಾ ಮಕ್ಕಳಲ್ಲಿ ಸಾಮ್ಯತೆ ಇರುವ ಅಂಶಗಳನ್ನು ಗುರುತಿಸಿ ಸಾಮಾನ್ಯೀಕರಿಸಲಾಗಿದೆ.

ಈ ಭಾಗವು ಕ್ಷೇತ್ರ ಮಾಹಿತಿಯನ್ನು ವಿಶ್ಲೇಷಿಸುವುದಾಗಿದೆ. ಮಕ್ಕಳು ಪಡೆದುಕೊಂಡಿರುವ ಅಂತಸ್ಥರೂಪಕ್ಕೆ ಅನುಗುಣವಾಗಿ ನುಡಿದ ರೂಪವು ನಿಯಮಬದ್ಧವಾಗಿರುತ್ತದೆಯೇ; ಮಕ್ಕಳು ನಿಯಮಗಳನ್ನು ಪೂರ್ಣವಾಗಿ ಪಡೆದುಕೊಳ್ಳುತ್ತಾರೆಯೇ; ಮತ್ತು ಪಡೆದುಕೊಂಡ ನಿಯಮಗಳನ್ನು ಅಭಿವ್ಯಕ್ತಿಗೊಳಿಸಿದಾಗ ಅದು ಅಂತಸ್ಥರೂಪಕ್ಕೆ ಅನುಗುಣವಾಗಿ ನಿಯಮಬದ್ಧವಾಗಿರುತ್ತದೆಯೇ; ಎನ್ನುವ ಅಂಶಗಳನ್ನು ಏಕಪದ, ಎರಡು ಮತ್ತು ಎರಡಕ್ಕಿಂತ ಹೆಚ್ಚಿನ ಪದಗಳನ್ನು ಒಳಗೊಂಡ ವಾಕ್ಯಗಳು, ಕಾಲಸೂಚಕ ಮತ್ತು ಆಖ್ಯಾತ ಪ್ರತ್ಯಯಗಳನ್ನು ಒಳಗೊಂಡಂತಹ ವಾಕ್ಯಗಳು, ನಿಷೇಧಾರ್ಥಕ ಮತ್ತು ಪ್ರಶ್ನಾರ್ಥಕ ವಾಕ್ಯಗಳ ಮೂಲಕ ತಿಳಿಯಬಹುದಾಗಿದೆ.

**ಟಿಪ್ಪಣಿ:-** ಸಂವಹನದಲ್ಲಿ ಮಕ್ಕಳು ಅಮ್ಮ, ಅಪ್ಪ, ಅಕ್ಕ, ಅಣ್ಣ, ಆಂಟಿ ಮುಂತಾದ ಸಂಬೋಧನಾ ವಾಚಕಗಳನ್ನು ಬಳಸುವ ಮೂಲಕ ಗಮನ ಸೆಳೆದು ತಮ್ಮ ಅಗತ್ಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾರೆ. ಕೆಲವು ವೇಳೆ ಈ ಸಂಬೋಧನಾ ರೂಪಗಳು ವಾಕ್ಯದಲ್ಲಿ ಉಲ್ಲೇಖ ರೂಪಗಳಾಗಿಯೂ ಬಳಕೆಯಾಗುತ್ತವೆ. ಕ್ಷೇತ್ರ ಮಾಹಿತಿಯ ವಿಶ್ಲೇಷಣೆಯುದ್ದಕ್ಕೂ ಈ ವಿಧವಾದ ಅನೇಕ ನಿದರ್ಶನಗಳು ಕಂಡುಬರುತ್ತವೆ. ಕೆಲವು ಉದಾಹರಣೆಗಳ ಮೂಲಕ ಅವುಗಳನ್ನು ತಿಳಿಯಬಹುದಾಗಿದೆ.

**ಸಂಬೋಧನಾ ರೂಪಗಳಾಗಿ ಸಂಬಂಧವಾಚಕಗಳ ಬಳಕೆ**

- ನು. ರೂ - ಆಂಟಿ ಚಾಕಿ
  ತಿ . ರೂ - ನಿಮ್ಮ ಬಳಿ ಇರುವ ಚಾಕಲೇಟ್ ಕೊಡಿ
  **ಆಂಟಿ** - ಸಂಬೋಧನಾ ರೂಪ
  ನಿಮ್ಮ ಬಳಿ ಇರುವ ಚಾಕಲೇಟ್ - ನಾ. ಗು.
  ಕೊಡಿ - ಕ್ರಿ.ಗು.
- ನು.ರೂ - ಅಮ್ಮ ಮಮ್ಮು (ಮಮ್ಮು-ಊಟ)
  ತಿ.ರೂ. - ನೀನು ನನಗೆ ಊಟ ಕೊಡು
  **ಅಮ್ಮ** - ಸಂಬೋಧನಾ ರೂಪ
  ನೀನು - ನಾ.ಗು.
  ನನಗೆ ಊಟ ಕೊಡು - ಕ್ರಿ. ಗು.
- ನು.ರೂ. - ಆಂಟಿ ಚೀರೆ (ಚೀರೆ- ಸೀರೆ)
  ತಿ.ರೂ. - ನೀವು ನನಗೆ ಸೀರೆ ಕೊಡಿ
  **ಆಂಟಿ** - ಸಂಬೋಧನಾ ರೂಪ
  ನೀವು - ನಾ.ಗು.
  ನನಗೆ ಊಟ ಕೊಡಿ - ಕ್ರಿ.ಗು.

**ಉಲ್ಲೇಖ ರೂಪಗಳಾಗಿ ಸಂಬಂಧವಾಚಕಗಳು**

- ನು.ರೂ. - ಅಮ್ಮ ಆಚೆ (ಆಚೆ -ಹೊರಗೆ)
  ತಿ.ರೂ. - ಅಮ್ಮ ಹೊರಗೆ ಹೋಗಿದ್ದಾರೆ.

(ಸಂದರ್ಭ- ಮಗುವಿನ ಆಂಟಿ ಮಗುವನ್ನು ಅಮ್ಮ ಎಲ್ಲಿ ಎಂದು ಕೇಳಿದಾಗ)

**ಅಮ್ಮ** - ಉಲ್ಲೇಖ ರೂಪ
ಅಮ್ಮ - ನಾ.ಗು.
ಹೊರಗೆ ಹೋಗಿದ್ದಾರೆ- ಕ್ರಿ.ಗು.

ಮಗು ಇಲ್ಲಿ 'ಅಮ್ಮ' ಎನ್ನುವ ಸಂಬಂಧವಾಚಕವನ್ನು ಉಲ್ಲೇಖ ರೂಪವಾಗಿ ನುಡಿದಿದೆ. ಅಮ್ಮನ ಕುರಿತಾಗಿ ಮತ್ತೊಬ್ಬರಿಗೆ ಹೇಳುತ್ತಿದೆ.

- ನು.ರೂ. - ಅಣ್ಣ ಮಮ್ಮು( ಮಮ್ಮು-ಊಟ)

  ತಿ.ರೂ. - ಅಣ್ಣ ಊಟ ಮಾಡುತ್ತಿದ್ದಾನೆ.

  ಅಣ್ಣ - ಉಲ್ಲೇಖ ರೂಪ

  ಅಣ್ಣ - ನಾ.ಗು.

  ಊಟ ಮಾಡುತ್ತಿದ್ದಾನೆ- ಕ್ರಿ.ಗು.

ಈ ವಾಕ್ಯದಲ್ಲಿ 'ಅಣ್ಣ' ಎನ್ನುವ ಪದ ಉಲ್ಲೇಖ ರೂಪವಾಗಿ ಕಾರ್ಯನಿರ್ವಹಿಸುತ್ತಿದೆ. ಅಣ್ಣನ ಕುರಿತಾಗಿ ಮತ್ತೊಬ್ಬರಿಗೆ ಹೇಳುತ್ತಿದೆ.

- ನು.ರೂ. - ಅಕ್ಕ ಆಚೆ (ಆಚೆ -ಹೊರಗೆ)

  ತಿ.ರೂ. - ಅಕ್ಕ ಹೊರಗೆ ಹೋಗಿದ್ದಾರೆ.

  ಅಕ್ಕ - ಉಲ್ಲೇಖ ರೂಪ

  ಅಕ್ಕ - ನಾ.ಗು.

  ಹೊರಗೆ ಹೋಗಿದ್ದಾರೆ- ಕ್ರಿ.ಗು.

ವಾಕ್ಯದಲ್ಲಿ 'ಅಕ್ಕ' ಎನ್ನುವುದು ಉಲ್ಲೇಖ ರೂಪವಾಗಿ ಬಳಕೆಯಾಗಿದೆ. ಅಕ್ಕನ ಕುರಿತಾಗಿ ಮತ್ತೊಬ್ಬರಿಗೆ ಹೇಳುತ್ತಿದೆ.

## ಕ್ಷೇತ್ರಕಾರ್ಯದ ಮಾಹಿತಿ ದತ್ತಾಂಶವನ್ನು ವಿಶ್ಲೇಷಿಸಲು ಬಳಸಿಕೊಂಡಿರುವ ಸಂಕೇತಗಳು.

ವಾಕ್ಯದಲ್ಲಿನ ನಾಮಪದ ಮತ್ತು ಕ್ರಿಯಾಪದ ಗುಚ್ಚಗಳನ್ನು ತೋರಿಸಲು ಕಂಸಗಳನ್ನು ( ) ಅಳವಡಿಸಲಾಗಿದೆ. ವಾಕ್ಯದಲ್ಲಿ ಮಕ್ಕಳು ನುಡಿದ ರೂಪವನ್ನು ತೋರಿಸಲು ಆ ರೂಪವನ್ನು ಬೋಲ್ಡ್ ಮಾಡಲಾಗಿದೆ. ಮಗುವಿನ ನುಡಿದ ರೂಪದ ಮುಂದೆ ವಯೋಮಾನಕ್ಕೆ ಅನುಸಾರವಾಗಿ ರೂಪಿಸಿಕೊಂಡಿರುವ ಗುಂಪಿನ ಸಂಕೇತ ಮತ್ತು ಸಂಖ್ಯೆಯನ್ನು ಕೊಡಲಾಗಿದೆ.

- ನು-ರೂ - ನುಡಿದ ರೂಪ (ಇದು ಮಗುವಿನ ಭಾಷಿಕ ಅಭಿವ್ಯಕ್ತಿಯಾಗಿರುತ್ತದೆ)
  ತಿ-ರೂ - ತಿಳಿದ ರೂಪ (ಇದು ಮಗು ಅಭಿವ್ಯಕ್ತಿಗೊಳಿಸಿದ ಭಾಷಿಕ ದತ್ತಾಂಶದ ಪೂರ್ಣ ಅಂತಸ್ಥರೂಪ)
  ನಾ.ಗು - ನಾಮಪದ ಗುಚ್ಚ (ನೌನ್ ಫ್ರೇಸ್)
  ಕ್ರಿ.ಗು. - ಕ್ರಿಯಾಪದ ಗುಚ್ಚ ( ವರ್ಬ್ ಫ್ರೇಸ್)
  ವಿ - ವಿಶೇಷಣ

ಅಧ್ಯಾಯ-೪

# ಒಂದು ಪದದ ವಾಕ್ಯಗಳು

ಏಕಪದವನ್ನು ನುಡಿಯುವ ಮೂಲಕ ಇಡಿಯಾದ ವಾಕ್ಯವನ್ನು ಹೇಗೆ ಪ್ರತಿನಿಧಿಸುತ್ತಾರೆ. ಈ ಏಕ ಪದಗಳಲ್ಲಿ ನಾಮಪದ, ಸರ್ವನಾಮ ಮತ್ತು ಕ್ರಿಯಾಪದಗಳಿದ್ದು, ಇವು ನಾಮಪದ ಗುಚ್ಛಕ್ಕೆ ಸೇರಿದವುಗಳೋ ಅಥವಾ ಕ್ರಿಯಾಪದಗುಚ್ಛಗಳಿಗೆ ಸೇರಿದವುಗಳೋ ಎನ್ನುವುದನ್ನು ವಿವಿಧ ನಿದರ್ಶನಗಳ ಮೂಲಕ ತಿಳಿಯಬಹುದಾಗಿದೆ. ಅಲ್ಲದೆ, ಮಗು ಒಂದು ಪದವನ್ನು ನುಡಿದರೂ ಅದು ತಿಳಿದಿರುವ ಅಂತಸ್ಥರೂಪ ಯಾವುದು. ಅಂತಸ್ಥರೂಪಕ್ಕೆ ತಕ್ಕಂತೆ ನುಡಿದ ರೂಪ ಹೇಗೆ ನಿಯಮಬದ್ಧವಾಗಿರುತ್ತದೆ ಎಂಬುದನ್ನು ಈ ಅಧ್ಯಾಯದಲ್ಲಿ ನಿದರ್ಶನಗಳ ಮೂಲಕ ತಿಳಿಯಬಹುದಾಗಿದೆ.

### ೪.೧. ಒಂದು ನಾಮಪದಗಳನ್ನು ಒಳಗೊಂಡ ವಾಕ್ಯಗಳು

- ನು.ರೂ. - ಅಂಬ (ಬಿ ೨)
  ತಿ.ರೂ. - ಅದು ಹಸು ಆಗಿದೆ
  (ಅದು), ((ಹಸು) ಆಗಿದೆ)
  ನಾ.ಗು. - ಅದು
  ಕ್ರಿ.ಗು - ಹಸು ಆಗಿದೆ

(ಸಂದರ್ಭ: ಮಗು ಮನೆಯ ಮುಂದೆ ನಿಂತಿರುವ ಹಸುವನ್ನು ತೋರಿಸಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ನಾಮಪದವನ್ನು ನುಡಿದಿದೆ. ಬಳಕೆಯು 'ಹಸು' ಎನ್ನುವ ಪ್ರಾಮಾಣಿತ ರೂಪವಾಗಿರದೆ 'ಅಂಬ' ಎನ್ನುವ ಶಿಶುಭಾಷೆಯ ರೂಪವನ್ನು ಬಳಸಿದೆ.

ನಾಮಪದ ಗುಚ್ಛಕ್ಕೆ ಸೇರಿದ 'ಅದು' ಎನ್ನುವ ಪದವನ್ನು ಬಳಸದಿದ್ದರೂ ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

- ನು.ರೂ. - ಆಕಿ (ಮ್ಯಾಕಿ) (ಮೇಕೆ-ಆಡು) (ಬಿ ೨)
  ತಿ.ರೂ. - ಅದು ಮೇಕೆ ಆಗಿದೆ.
  (ಅದು) ((ಮೇಕೆ) ಆಗಿದೆ)
  ಅದು - ನಾ.ಗು.
  ಮೇಕೆ ಆಗಿದೆ - ಕ್ರಿ.ಗು.

ಸಂದರ್ಭ: ದೂರದಲ್ಲಿರುವ 'ಆಡ' ನ್ನು ತೋರಿಸಿ ಅದು ಏನು ಎಂದು ಕೇಳಿದಾಗ ಅದಕ್ಕೆ ಉತ್ತರವಾಗಿ ಮೇಲಿನ ಪದವನ್ನು ಬಳಸುತ್ತದೆ.

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ಉಚ್ಚರಿಸಿದೆ. 'ಮೇಕೆ' ಎನ್ನುವುದು ನಿರ್ದಿಷ್ಟ ಪ್ರದೇಶದ ಆಡುಭಾಷೆಯಾಗಿದೆ. ಮಗು 'ಮೇಕೆ' ಎನ್ನುವ ಆಡುಭಾಷೆಯನ್ನು 'ಆಕಿ' ಎಂದು ಉಚ್ಚರಿಸಿದೆ. 'ಮ' ಕಾರಕ್ಕೆ ಬದಲಾಗಿ 'ಅ' ಕಾರವನ್ನು ನುಡಿದಿದೆ.

ಸಾಮಾನ್ಯವಾಗಿ ಮಕ್ಕಳು ಈ ವಯೋಮಾನದಲ್ಲಿ ಪದಾದಿಯ ಸ್ವರಗಳನ್ನು ಒಳಗೊಂಡ ಪದಗಳನ್ನು ನುಡಿಯುತ್ತಾರೆ.

- ನು.ರೂ. - ಆನಿ (ಆನೆ) (ಬಿ ೨)
  ತಿ.ರೂ. - ಇದು ಆನೆ ಆಗಿದೆ
  (ಇದು) ((ಆನೆ) ಆಗಿದೆ)
  ಇದು - ನಾ.ಗು.
  ಆನೆ ಆಗಿದೆ -ಕ್ರಿ.ಗು.

(ಸಂದರ್ಭ- ಪುಸ್ತಕವನ್ನು ತೋರಿಸಿ ಈ ಚಿತ್ರದಲ್ಲಿರುವುದು ಏನು ಎಂದು ಕೇಳಿದಾಗ ಅದಕ್ಕೆ ಉತ್ತರವಾಗಿ 'ಆನಿ' ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ಉಚ್ಚರಿಸಿದೆ. ನಾಮಪದ ಗುಚ್ಛಕ್ಕೆ ಸೇರಿದ 'ಇದು' ಎನ್ನುವ ಪದವನ್ನು ಉಚ್ಚರಿಸದಿದ್ದರೂ ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

- ನು.ರೂ. - ಆಚ್ (ವಾಚ್) (ಬಿ ೨)
  ತಿ.ರೂ. - ಅಣ್ಣ ಕೈಗೆ ವಾಚ್ ಕಟ್ಟಿಕೊಂಡಿದ್ದಾರೆ.
  (ಅಣ್ಣ) (ಕೈಗೆ (ವಾಚ್) ಕಟ್ಟಿಕೊಂಡಿದ್ದಾರೆ)
  ಅಣ್ಣ - ನಾ.ಗು.
  ಕೈಗೆ ವಾಚ್ ಕಟ್ಟಿಕೊಂಡಿದ್ದಾರೆ- ಕ್ರಿ.ಗು.

(ಸಂದರ್ಭ: ತನ್ನ ಅಣ್ಣ ಕೈಗೆ ವಾಚ್ ಕಟ್ಟಿಕೊಂಡಿರುವುದನ್ನು ನೋಡಿ ಅಮ್ಮನಿಗೆ ಹೇಳುತ್ತದೆ)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ಉಚ್ಚರಿಸಿದೆ. ಪದಾದಿಯ 'ಭ' ಕಾರಕ್ಕೆ ಬದಲಾಗಿ 'ಅ' ಕಾರವನ್ನು ಉಚ್ಚರಿಸಿದೆ. ಮಗು ನಾಮಪದ ಗುಚ್ಛಕ್ಕೆ ಸೇರಿದ 'ಅಣ್ಣ' ಎನ್ನುವ ಪದವನ್ನು ನುಡಿಯದಿದ್ದರೂ ಅದು ಮಗುವಿನ ಅಂತಸ್ಥದಲ್ಲಿರುತ್ತದೆ.

- ನು.ರೂ. - ಪಪ್ಲಿ (ಚಪ್ಪಲಿ) (ಬಿ ೧)
  ತಿ.ರೂ. - ನೀನು ಚಪ್ಪಲಿ ಹಾಕಿಕೊ
  (ನೀನು) ((ಚಪ್ಪಲಿ) ಹಾಕಿಕೊ)
  ನೀನು - ನಾ.ಗು.
  ಚಪ್ಪಲಿ ಹಾಕಿಕೊ - ಕ್ರಿ.ಗು.

(ಸಂದರ್ಭ: ಮಗುವಿಗೆ ಹೊರಗೆ ಹೋಗಬೇಕಾಗಿದೆ. ಕಾರಣ ತನ್ನ ಅಮ್ಮನನ್ನು ಚಪ್ಪಲಿ ಬಳಿ ಕರೆತಂದು ಚಪ್ಪಲಿಯನ್ನು ತೋರಿಸಿ ಹಾಕಿಕೋ ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ನುಡಿದಿದೆ. 'ಚಪ್ಪಲಿ' ಎನ್ನುವ ಪದಕ್ಕೆ ಬದಲಾಗಿ 'ಪಪ್ಲಿ' ಎನ್ನುವ ಶಿಶು ಭಾಷೆಯ ರೂಪವನ್ನು ನುಡಿದಿದೆ.

ಈ ವಯೋಮಾನದಲ್ಲಿ ಮಕ್ಕಳು ಪದಾದಿಯ ಓಷ್ಠ್ಯ ವರ್ಣಗಳನ್ನು ಹೆಚ್ಚಾಗಿ ನುಡಿಯುತ್ತಾರೆ.

- ನು.ರೂ. - ಚೀಪು (ಜೀಪು) (ಬಿ ೨)
  ತಿ.ರೂ. - ಅಲ್ಲಿ ಜೀಪು ಇದೆ.
  (ಅಲ್ಲಿ) ((ಜೀಪು) ಇದೆ)
  ಅಲ್ಲಿ - ನಾ.ಗು.
  ಜೀಪು ಇದೆ - ಕ್ರಿ.ಗು.

(ಸಂದರ್ಭ: ಮನೆಯ ಮುಂದೆ ನಿಂತ ಜೀಪನ್ನು ನೋಡಿ ಒಳಗೆ ಬಂದು ಅಲ್ಲಿ ಇರುವ ಜನಗಳಿಗೆ ಹೇಳುವುದು. ಏನು ಎಂದು ಕೇಳಿದಾಗಲೂ ಹೊರಗೆ ತೋರಿಸಿ ಹಾಗೆ ಹೇಳುವುದು.)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ನುಡಿದಿದೆ. ಪದಾದಿಯ 'ಜ' ಕಾರಕ್ಕೆ ಬದಲಾಗಿ 'ಚ' ಕಾರವನ್ನು ನುಡಿದಿದೆ. ಮಗು ನಾಮಪದ ಗುಚ್ಛಕ್ಕೆ ಸೇರಿದ 'ಅಲ್ಲಿ' ಎನ್ನುವ ಸರ್ವನಾಮವನ್ನು ನುಡಿಯದಿದ್ದರೂ ಅದು ಅಂತಸ್ಥವಾಗಿರುತ್ತದೆ.

- ನು.ರೂ. - ಆಟೋ (ಬಿ ೨)

  ತಿ.ರೂ. - ಅಲ್ಲಿ ಆಟೋ ಬರುತ್ತಿದೆ.

  (ಅಲ್ಲಿ) ((ಆಟೋ) ಬರುತ್ತಿದೆ)

  ಅಲ್ಲಿ - ನಾ.ಗು.

  ಆಟೋ ಬರುತ್ತಿದೆ - ಕ್ರಿ.ಗು.

(ಸಂದರ್ಭ: ಮನೆಯ ಬಳಿ ನಿಂತಾಗ ಬರುತ್ತಿರುವ ಆಟೋವನ್ನು ನೋಡಿ ಹೇಳುತ್ತದೆ. ಮಗು ಕ್ರಿಯಾಪದ ಗುಚ್ಛದಲ್ಲಿನ ಆಟೋ ಎಂಬ ನಾಮಪದವನ್ನು ನುಡಿದಿದೆ.)

- ನು.ರೂ. - ಬಸ್ಸು (ಬಿ ೪)

  ತಿ.ರೂ. - ಊರಿಗೆ ಬಸ್ಸಿನಲ್ಲಿ ಹೋಗೋಣ

  (ಊರಿಗೆ ) ((ಬಸ್ಸಿನಲ್ಲಿ) ಹೋಗೋಣ)

  ಊರಿಗೆ - ನಾ.ಗು.

  ಬಸ್ಸಿನಲ್ಲಿ ಹೋಗೋಣ - ಕ್ರಿ.ಗು.

(ಸಂದರ್ಭ: ಊರಿಗೆ ಬಸ್ಸಿನಲ್ಲಿ ಹೋಗೋಣವೋ ಅಥವಾ ಆಟೋನಲ್ಲಿ ಹೋಗೋಣವೋ ಎಂದು ಕೇಳಿದಾಗ ಬಸ್ಸು ಎಂದು ಹೇಳುತ್ತದೆ)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ನುಡಿದಿದೆ.

- ನು.ರೂ. - ಚಾರು (ಸಾರು) (ಬಿ ೫)

  ತಿ.ರೂ - ಅದು ಸಾರು ಆಗಿದೆ.

  (ಅದು) ((ಸಾರು) ಆಗಿದೆ)

  ಅದು -ನಾ.ಗು.

  ಸಾರು ಆಗಿದೆ - ಕ್ರಿ.ಗು.

(ಸಂದರ್ಭ: ಪಾತ್ರೆಯಲ್ಲಿರುವ ಸಾರನ್ನು ತೋರಿಸಿ ಅದು ಏನು ಎಂದು ಕೇಳಿದಾಗ ಸಾರು ಎಂದು ಹೇಳುತ್ತದೆ).

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ಉಚ್ಚರಿಸಿದೆ. 'ಚಾರು' ಎನ್ನುವಲ್ಲಿ ಪದಾದಿಯ 'ಸ' ಕಾರಕ್ಕೆ ಬದಲಾಗಿ 'ಚ' ಕಾರವನ್ನು ಬಳಸಿದೆ. ನಾಮಪದ ಗುಚ್ಛಕ್ಕೆ ಸೇರಿದ 'ಅದು' ಎನ್ನುವ ಪದವನ್ನು ಬಳಸದಿದ್ದರೂ ಅದು ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

- ನು.ರೂ. - ಕೋಚಿ (ಕೋತಿ) (ಬಿ ೨)

  ತಿ.ರೂ. - ಅಲ್ಲಿ ಕೋತಿ ಬಂದಿದೆ.

  (ಅಲ್ಲಿ) ((ಕೋತಿ) ಬಂದಿದೆ)

  ಅಲ್ಲಿ - ನಾ.ಗು.

  ಕೋತಿ ಬಂದಿದೆ - ಕ್ರಿ.ಗು.

(ಸಂದರ್ಭ: ಮಗು ಹೊರಗೆ ಕೋತಿ ಬಂದಿರುವುದನ್ನು ನೋಡಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದವನ್ನು ನುಡಿದಿದೆ. ನಾಮಪದ ಗುಚ್ಛಕ್ಕೆ ಸೇರಿದ 'ಅಲ್ಲಿ' ಎನ್ನುವ ಸರ್ವನಾಮವನ್ನು ನುಡಿಯದಿದ್ದರೂ ಅದು ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

ಮೇಲಿನ ಎಲ್ಲಾ ನಿದರ್ಶನಗಳು ಕ್ರಿಯಾಪದ ಗುಚ್ಛಕ್ಕೆ ಸೇರಿದ ನಾಮಪದಗಳಾಗಿವೆ.

೪.೨. ಸರ್ವನಾಮಗಳನ್ನು ಒಳಗೊಂಡ ವಾಕ್ಯಗಳು

- ನು.ರೂ. - ನನ್ನ (ಬಿ ೧)
  ತಿ.ರೂ. - ಈ ಬೊಂಬೆ ನನ್ನದು ಆಗಿದೆ
  (ಈ ಬೊಂಬೆ) ((ನನ್ನದು) ಆಗಿದೆ)
  ಈ ಬೊಂಬೆ - ನಾ.ಗು.
  ನನ್ನದು ಆಗಿದೆ - ಕ್ರಿ.ಗು.

(ಸಂದರ್ಭ: ಈ ಬೊಂಬೆ ಯಾರದು ಎಂದು ಕೇಳಿದಾಗ ಮಗು 'ನನ್ನ' ಎಂದು ಹೇಳುತ್ತದೆ.
ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಪ್ರಥಮ ಪುರುಷ ಸರ್ವನಾಮವನ್ನು ನುಡಿದಿದೆ.

- ನು.ರೂ. - ನಾನು (ಬಿ ೨)
  ತಿ.ರೂ. - ಆಚೆಗೆ ನಾನು ಬರುತ್ತೇನೆ
  (ಆಚೆಗೆ) ((ನಾನು) ಬರುತ್ತೇನೆ)
  ಆಚೆಗೆ - ನಾ.ಗು.
  ನಾನು ಬರುತ್ತೇನೆ -ಕ್ರಿ.ಗು.

(ಸಂದರ್ಭ: ಮಗು ತನ್ನ ಅಣ್ಣ ಹೊರಗೆ ಹೋಗುವಾಗ ನಾನು ಬರುತ್ತೇನೆ ಎಂದು ಕೇಳುತ್ತದೆ.)
ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಉತ್ತಮ ಪುರುಷ ಸರ್ವನಾಮವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ನಂದು (ಬಿ ೪)
  ತಿ.ರೂ. - ಈ ಬ್ಯಾಗ್ ನಂದು ಆಗಿದೆ
  (ಈ ಬ್ಯಾಗ್) ((ನಂದು) ಆಗಿದೆ)
  ಈ ಬ್ಯಾಗ್ - ನಾ.ಗು.
  ನಂದು ಆಗಿದೆ - ಕ್ರಿ.ಗು.

(ಸಂದರ್ಭ: ಈ ಬ್ಯಾಗ್ ಯಾರದ್ದು ಎಂದು ಕೇಳಿದಾಗ ಮೇಲಿನ ರೀತಿ ಹೇಳುತ್ತದೆ)
ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಉತ್ತಮ ಪುರುಷ ಸರ್ವನಾಮವನ್ನು ಅಭಿವ್ಯಕ್ತಗೊಳಿಸಿದೆ.

- ನು.ರೂ. - ನನ್ನ (ಬಿ ೨)
  ತಿ.ರೂ. - ಆ ಚೇರ್ ನನ್ನದು ಆಗಿದೆ
  (ಆ ಚೇರ್) ((ನನ್ನದು) ಆಗಿದೆ)
  ಆ ಚೇರ್ - ನಾ.ಗು.
  ನನ್ನದು ಆಗಿದೆ - ಕ್ರಿ.ಗು.

(ಸಂದರ್ಭ: ತನ್ನ ಅಣ್ಣ ಅದು ನನ್ನ ಛೇರ್ ಮುಟ್ಟಬೇಡ ಎಂದು ಹೇಳಿದಾಗ ಮಗು 'ನನ್ನ' ಎಂದು ಹೇಳುತ್ತದೆ.)
ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಉತ್ತಮ ಪುರುಷ ಸರ್ವನಾಮವನ್ನು ಅಭಿವ್ಯಕ್ತಗೊಳಿಸಿದೆ.

- ನು.ರೂ. - ಇಲ್ಲಿ (ಬಿ ೩)
  ತಿ.ರೂ. - ಆನೆ ಇಲ್ಲಿ ಇದೆ
  (ಆನೆ) ((ಇಲ್ಲಿ) ಇದೆ)
  ಆನೆ - ನಾ.ಗು.
  ಇಲ್ಲಿ ಇದೆ - ಕ್ರಿ.ಗು.

(ಸಂದರ್ಭ: ಆನೆ ಎಲ್ಲಿದೆ ಎಂದು ಬೊಂಬೆಗಳನ್ನು ತೋರಿಸಿ ಕೇಳಿದಾಗ ಇಲ್ಲಿ ಎಂದು ಹೇಳುತ್ತದೆ)
ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಇಲ್ಲಿ' ಎನ್ನುವ ಸರ್ವನಾಮವನ್ನು ನುಡಿದಿದೆ.

- ನು.ರೂ. - ಅಲ್ಲಿ (ಬಿ ೨)
  ತಿ.ರೂ. - ನಿನ್ನ ಬಾಕ್ಸ್ ಅಲ್ಲಿ ಇದೆ
  (ನಿನ್ನ ಬಾಕ್ಸ್) ((ಅಲ್ಲಿ) ಇದೆ)
  ನಿನ್ನ ಬಾಕ್ಸ್ - ನಾ.ಗು.
  ಅಲ್ಲಿ ಇದೆ - ಕ್ರಿ.ಗು.

(ಸಂದರ್ಭ: ಮಗುವಿನ ಅಣ್ಣ ತನ್ನ ಬಾಕ್ಸ್ ಎಲ್ಲಿ ಹೋಗಿದೆ ಎನ್ನುತ್ತಾ ಹುಡುಕುವಾಗ ಮಗು ಮೇಲಿನ ಮಾತನ್ನು ಹೇಳುತ್ತಿದೆ).

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಅಲ್ಲಿ' ಎನ್ನುವ ಸರ್ವನಾಮವನ್ನು ಅಭಿವ್ಯಕ್ತಿಗೊಳಿಸಿದೆ. ಮಗು ನಾಮಪದ ಗುಚ್ಚಕ್ಕೆ ಸೇರಿದ 'ನಿನ್ನ' ಎನ್ನುವ ಮಧ್ಯಮ ಪುರುಷ ಸರ್ವನಾಮವನ್ನು ನುಡಿಯದಿದ್ದರೂ ಅದು ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

- ನು.ರೂ. - ಮೇನೆ (ಮೇಲೆ) (ಬಿ ೨)
  ತಿ.ರೂ. - ಹುಳು ಗೋಡೆಯ ಮೇಲೆ ಇದೆ
  (ಹುಳು) (ಗೋಡೆಯ (ಮೇಲೆ) ಇದೆ)
  ಹುಳು - ನಾ.ಗು.
  ಗೋಡೆಯ ಮೇಲೆ ಇದೆ - ಕ್ರಿ.ಗು.

(ಸಂದರ್ಭ: ಮಗು ಹುಳುವೊಂದು ಸ್ವಲ್ಪ ಎತ್ತರದ ಗೋಡೆಯ ಮೇಲೆ ಕುಳಿತಿರುವುದನ್ನು ನೋಡಿ ಹೇಳುತ್ತದೆ).

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಮೇಲೆ' ಎನ್ನುವ ಸರ್ವನಾಮವನ್ನು ನುಡಿದಿದೆ. ಮಕ್ಕಳು 'ಅಲ್ಲಿ, ಇಲ್ಲಿ' ಎನ್ನುವ ಪದಗಳನ್ನು ನುಡಿಯಲು ಆರಂಭಿಸಿದ ನಂತರ 'ಮೇಲೆ' ಎಂಬ ಪದವನ್ನು ನುಡಿಯುತ್ತಾರೆ.)

೪.೩. ಕ್ರಿಯಾಪದಗಳನ್ನೊಳಗೊಂಡ ವಾಕ್ಯಗಳು

- ನು.ರೂ. - ಬಾ (ಬಿ ೨)

  ತಿ.ರೂ - ನಾಯಿ ನೀನು ಇಲ್ಲಿ ಬಾ

  (ನೀನು) (ಇಲ್ಲಿ (ಬಾ))

  ನೀನು - ನಾ.ಗು.

  ಇಲ್ಲಿ ಬಾ - ಕ್ರಿ.ಗು.

(ಸಂದರ್ಭ: ಮಗು ಮನೆಯ ಮುಂದೆ ನಿಂತಿರುವ ನಾಯಿಯನ್ನು ಕರೆಯುತ್ತದೆ. )

ಮಗು ಕ್ರಿಯಾಪದ ಗುಚ್ಚದಲ್ಲಿನ 'ಬಾ' ಎನ್ನುವ ಕ್ರಿಯಾಪದಗಳನ್ನು ಅಭಿವ್ಯಕ್ತಿಗೊಳಿಸಿದೆ. ನಾಮಪದ ಗುಚ್ಚಕ್ಕೆ ಸೇರಿದ 'ನೀನು' ಎನ್ನುವ ಸರ್ವನಾಮವನ್ನು ಬಳಸದಿದ್ದರೂ ಅದು ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

- ನು.ರೂ. - ತಾ (ಬಿ ೪)

  ತಿ.ರೂ. - ಆ ಪೆನ್ನು ತಾ

  (ಆ ಪೆನ್ನು) (ತಾ)

  ಆ ಪೆನ್ನು - ನಾ.ಗು.

  ತಾ - ಕ್ರಿ.ಗು.

(ಸಂದರ್ಭ: ತನ್ನ ಆಂಟಿಯ ಕೈಯಲ್ಲಿರುವ ಪೆನ್ನನ್ನು ನೋಡಿ 'ತಾ' ಎಂದು ಕೇಳುತ್ತದೆ.)

ಮಗು ಕ್ರಿಯಾಪದ ಗುಚ್ಚದಲ್ಲಿನ 'ತಾ' ಯೆನ್ನುವ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ತಗ (ಬಿ ೨)

  ತಿ.ರೂ - ನೀನು ಹಪ್ಪಳವನ್ನು ತಗ

  (ನೀನು) (ಹಪ್ಪಳವನ್ನು (ತಗ))

  ನೀನು - ನಾ.ಗು.

  ಹಪ್ಪಳವನ್ನು ತಗ - ಕ್ರಿ.ಗು.

(ಸಂದರ್ಭ: ಅಣ್ಣನಿಗೆ ಹಪ್ಪಳವನ್ನು ಕೊಟ್ಟು ಬಾ ಎಂದು ಹೇಳಿದಾಗ ತನ್ನ ಅಣ್ಣನ ಬಳಿ ಹೋಗಿ 'ತಗ' ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಧಾತುವನ್ನು ಅಭಿವ್ಯಕ್ತಿಗೊಳಿಸಿದೆ. ಮಗು ಆಡುಭಾಷೆಯ 'ತಗ' ಎನ್ನುವ ರೂಪವನ್ನು ಬಳಸಿದೆ. 'ತಗ, ತಕ್ಕ, ತಗೋ' ಇವುಗಳು ಆಯಾ ಪ್ರದೇಶಕ್ಕೆ ಅನುಸಾರವಾಗಿ ಬಳಕೆಗೊಳ್ಳುವ ವಿಧ್ಯರ್ಥಕ ಕ್ರಿಯಾಧಾತುಗಳು.

- ನು.ರೂ. - ತಾ (ಬಿ ೧)

  ತಿ.ರೂ. - ನೀನು ಪೆನ್ನನ್ನು ತಗ

  (ನೀನು) (ಪೆನ್ನನ್ನು (ತಗ))

  ನೀನು - ನಾ.ಗು.

  ಪೆನ್ನನ್ನು ತಗ - ಕ್ರಿ.ಗು.

(ಸಂದರ್ಭ: ಮಗು ಪೆನ್ನನ್ನು ತನ್ನ ಆಂಟಿಗೆ ಕೊಡುವಾಗ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ. 'ತಗೋ' ಎಂದು ಹೇಳಬೇಕಾದ ರೂಪಕ್ಕೆ 'ತಾ' ಎಂದು ನುಡಿದಿದೆ. ಸಾಮಾನ್ಯವಾಗಿ ಕೆಲವು ಮಕ್ಕಳು 'ತಾ ' ಮತ್ತು 'ತಗ' ಎನ್ನುವ ಎರಡೂ ರೂಪಕ್ಕೂ 'ತಾ' ಎಂದೇ ನುಡಿಯುತ್ತಾರೆ.

- ನು.ರೂ. - ತೆಯಿ (ತೆಗೆ) (ಬಿ ೨)

ತಿ.ರೂ - ನೀನು ಪಾಕೇಟನ್ನು ತೆಗಿ

(ನೀನು) (ಪಾಕೇಟನ್ನು (ತೆಗಿ))

ನೀನು - ನಾ.ಗು.

ಪಾಕೇಟನ್ನು ತೆಗಿ - ಕ್ರಿ.ಗು.

(ಸಂದರ್ಭ: ಮಗು ತಿನಿಸನ್ನು ತಿನ್ನುವ ಪಾಕೇಟನ ಸೀಲ್ ತೆಗೆದುಕೊಡು ಎಂದು ತನ್ನ ಆಂಟಿಯನ್ನು ಕೇಳುತ್ತದೆ).

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ. 'ತೆಗೆ' ಎನ್ನುವ ರೂಪಕ್ಕೆ ಬದಲಾಗಿ 'ತೆಯಿ' ಎನ್ನುವ ರೂಪವನ್ನು ಬಳಸಿದೆ.

- ನು.ರೂ. - ಆತು (ಆಯ್ತು) (ಬಿ ೨)

ತಿ.ರೂ - ನನ್ನ ಊಟ ಆಯ್ತು

(ನನ್ನ ಊಟ) (ಆಯ್ತು)

ನನ್ನ ಊಟ - ನಾ.ಗು.

ಆಯ್ತು - ಕ್ರಿ.ಗು.

(ಸಂದರ್ಭ: ಊಟ ಆಯ್ತಾ ಎಂದು ಕೇಳಿದಾಗ 'ಆಯ್ತು' ಎಂದು ಹೇಳುತ್ತದೆ. )

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ಆತು (ಮುಗಿಯಿತು) (ಬಿ ೨)

ತಿ.ರೂ. - ಬಾಟಲ್‌ನಲ್ಲಿ ಎಣ್ಣೆ ಆತು

(ಬಾಟಲ್‌ನಲ್ಲಿ) (ಎಣ್ಣೆ (ಆತು))

ಬಾಟಲ್‌ನಲ್ಲಿ - ನಾ.ಗು.

ಎಣ್ಣೆ ಆತು - ಕ್ರಿ.ಗು.

(ಸಂದರ್ಭ: ಬಾಟಲ್‌ನಲ್ಲಿ ಇರುವ ಎಣ್ಣೆಯನ್ನು ಪಾತ್ರೆಗೆ ಸುರಿಯುವಾಗ ಎಣ್ಣೆ ಮುಗಿಯಿತು. ಅದನ್ನು ನೋಡುತ್ತಿದ್ದ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ಚಾಕು (ಸಾಕು) (ಬಿ ೨)

ತಿ.ರೂ. - ನನಗೆ ಅನ್ನ ಸಾಕು

(ನನಗೆ) (ಅನ್ನ (ಸಾಕು))

ನನಗೆ - ನಾ.ಗು.

ಅನ್ನಸಾಕು - ಕ್ರಿ.ಗು.

(ಸಂದರ್ಭ: ಮಗುವಿನ ತಟ್ಟೆಗೆ ಅನ್ನ ಹಾಕುವಾಗ ಮಗು ಸಾಕು ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಪದವನ್ನು ನುಡಿದಿದೆ. ಸಾಕು ಎನ್ನುವಲ್ಲಿ ಪದಾದಿಯ 'ಸ' ಕಾರಕ್ಕೆ ಬದಲಾಗಿ 'ಚ' ಕಾರವನ್ನು ಬಳಸಿದೆ. ನಾಮಪದ ಗುಚ್ಚಕ್ಕೆ ಸೇರಿದ ನನಗೆ ಎನ್ನುವ ಪದವನ್ನು ನುಡಿಯದಿದ್ದರೂ ಅದು ಮಗುವಿನಲ್ಲಿ ಅಂತಸ್ಥವಾಗಿರುತ್ತದೆ.

- ನು.ರೂ. - ಓಗು (ಹೋಗು) (ಬಿ ೨)
  ತಿ.ರೂ. - ನೀನು ಹೊರಗೆ ಹೋಗು
  (ನೀನು) (ಹೊರಗೆ (**ಹೋಗು**))
  ನೀನು - ನಾ.ಗು.
  ಹೊರಗೆ ಹೋಗು - ಕ್ರಿ.ಗು.

(ಸಂದರ್ಭ: ತನ್ನ ಅಣ್ಣ ಆಟಿಕೆಗಳನ್ನು ಕಿತ್ತುಕೊಳ್ಳುವಾಗ ಅವರ ತಾಯಿ ತನ್ನ ಅಣ್ಣನಿಗೆ ಹೊರಗೆ ಹೋಗು ಎಂದು ಹೇಳಿದಾಗ ಮಗು ಕೂಡ ಹಾಗೆಯೇ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ಇಡು (ಇರಿಸು) (ಬಿ ೨)
  ತಿ.ರೂ. - ನೀನು ಫಾಸಿಲ್‌ನ ಗೊಂಬೆಯನ್ನು ಇಡು
  (ನೀನು) (ಫಾಸಿಲ್‌ನ ಗೊಂಬೆಯನ್ನು (**ಇಡು**))
  ನೀನು - ನಾ.ಗು.
  ಫಾಸಿಲ್‌ನ ಗೊಂಬೆಯನ್ನು ಇಡು - ಕ್ರಿ.ಗು.

(ಸಂದರ್ಭ: ಫಾಸಿಲ್‌ಗೊಂಬೆಗಳನ್ನು ಬೋರ್ಡಿಗೆ ಜೋಡಿಸುವಾಗ ಗೊಂಬೆಯನ್ನು ಇಡು ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛದಲ್ಲಿನ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ಅತ್ತುಕೊ (ಎತ್ತಿಕೊ) (ಬಿ ೫)
  ತಿ.ರೂ. - ನೀನು ನನ್ನನ್ನು ಎತ್ತಿಕೊ
  (ನೀನು) (ನನ್ನನ್ನು (**ಎತ್ತಿಕೊ**))
  ನೀನು - ನಾ.ಗು.
  ನನ್ನನ್ನು ಎತ್ತಿಕೊ - ಕ್ರಿ.ಗು.

(ಸಂದರ್ಭ: ತನ್ನನ್ನು ಎತ್ತಿಕೊ ಎಂದು ಮಗು ಅಮ್ಮನಿಗೆ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ಸಾಧಿತ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ಆಕು (ಬಿ ೨)
  ತಿ.ರೂ. - ನನಗೆ ಸಾರನ್ನು ಹಾಕು
  (ನನಗೆ) (ಸಾರನ್ನು (**ಹಾಕು**))
  ನನಗೆ - ನಾ.ಗು.
  ಸಾರನ್ನು ಹಾಕು - ಕ್ರಿ.ಗು.

(ಸಂದರ್ಭ: ಊಟಕ್ಕೆ ಕುಳಿತಾಗ ಸಾರನ್ನು ಹಾಕಬೇಕೋ; ಬೇಡವೋ ಎಂದು ಕೇಳಿದಾಗ 'ಆಕು' ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ.

- ನು.ರೂ. - ಚಿಚ್ಚು (ಕೂಡು) (ಬಿ ೨)
  ತಿ.ರೂ. - ನೀನು ಇಲ್ಲಿ ಕೂಡು
  (ನೀನು) (ಇಲ್ಲಿ (**ಕೂಡು**))
  ನೀನು - ನಾ.ಗು.
  ಇಲ್ಲಿ ಕೂಡು - ಕ್ರಿ.ಗು.

(ಸಂದರ್ಭ: ತನ್ನ ಅಮ್ಮ ಚೇರ್‌ನಲ್ಲಿ ಕುಳಿತಾಗ ಮಗು ತನ್ನ ಪಕ್ಕದಲ್ಲಿ ಕೂರು ಎಂದು ನೆಲಕ್ಕೆ ಕೈ ತೋರಿಸಿ ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಗುಚ್ಚದಲ್ಲಿನ ಕ್ರಿಯಾಧಾತುವನ್ನು ನುಡಿದಿದೆ. 'ಕೂಡು' ಎನ್ನುವ ರೂಪಕ್ಕೆ ಬದಲಾಗಿ 'ಚಿಚ್ಚು' ಎನ್ನುವ ಶಿಶುಭಾಷೆಯ ರೂಪವನ್ನು ಮಗು ರೂಢಿಸಿಕೊಂಡಿದೆ.

- ನು.ರೂ. - ಏತೆ (ಐತೆ-ಇದೆ) (ಬಿ ೨)

  ತಿ.ರೂ. - ಅಲ್ಲಿ ಹಸು ಇದೆ

  (ಅಲ್ಲಿ) (ಹಸು (ಇದೆ))

  ಅಲ್ಲಿ - ನಾ.ಗು.

  ಹಸು ಇದೆ - ಕ್ರಿ.ಗು.

(ಸಂದರ್ಭ: ಮನೆಯ ಮುಂದೆ ಇರುವ ಹಸುವನ್ನು ನೋಡಿ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಧಾತುವನ್ನು ನುಡಿದಿದೆ. 'ಏತೆ' ಎನ್ನುವಲ್ಲಿ ಪದಾದಿಯ 'ಐ' ಕಾರಕ್ಕೆ ಬದಲಾಗಿ 'ಏ' ಕಾರವನ್ನು ನುಡಿದಿದೆ. ಮಗು ತನ್ನ ಪ್ರಾದೇಶಿಕ ಭಾಷೆಯ ರೂಪವನ್ನು ರೂಢಿಸಿಕೊಂಡಿದೆ.

೪.೪. ಮಗು ಉಚ್ಚರಿಸಿದ ಪದ ನಾಮಪದ ಗುಚ್ಛಕ್ಕೆ ಸೇರಿದ ವಾಕ್ಯಗಳು

- ನು.ರೂ. - ದುದ್ದು (ದುಡ್ಡು-ಹಣ) (ಬಿ ೨)
  ತಿ.ರೂ. - ದುಡ್ಡು ಟೇಬಲ್ ಮೇಲೆ ಇದೆ
  (ದುಡ್ಡು) (ಟೇಬಲ್ ಮೇಲೆ ಇದೆ)
  ದುಡ್ಡು - ನಾ.ಗು.
  ಟೇಬಲ್ ಮೇಲೆ ಇದೆ - ಕ್ರಿ.ಗು.

(ಸಂದರ್ಭ: ಸ್ವಲ್ಪ ದೂರದಲ್ಲಿರುವ ಟೇಬಲ್ ಮೇಲೆ ಹಣ ಇಟ್ಟಿರುವುದನ್ನು ನೋಡಿದ ಮಗು ತನ್ನ ಅಮ್ಮನ ಕೈ ಎಳೆದು 'ದುಡ್ಡು' ಎಂದು ಹೇಳಿ ಟೇಬಲ್ ಇರುವ ಕಡೆ ಕೈ ತೋರಿಸುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ ನಾಮಪದವನ್ನು ನುಡಿದಿದೆ.

- ನು.ರೂ. - ಅಕ್ಕ (ಬಿ ೧)
  ತಿ.ರೂ. - ಅಕ್ಕ ನನ್ನ ಬೊಂಬೆಯನ್ನು ತೆಗೆದುಕೊಂಡಿದ್ದಾಳೆ
  (ಅಕ್ಕ) (ನನ್ನ ಬೊಂಬೆಯನ್ನು ತೆಗೆದುಕೊಂಡಿದ್ದಾಳೆ)
  ಅಕ್ಕ - ನಾ.ಗು.
  ನನ್ನ ಬೊಂಬೆಯನ್ನು ತೆಗೆದುಕೊಂಡಿದ್ದಾಳೆ - ಕ್ರಿ.ಗು.

(ಸಂದರ್ಭ: ಮಗುವಿನ ಅಕ್ಕ ಬೊಂಬೆಯನ್ನು ತೆಗೆದುಕೊಂಡಾಗ ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ ನಾಮಪದವನ್ನು ನುಡಿದಿದೆ. 'ಅಕ್ಕ' ಎಂಬುದು ಇಲ್ಲಿ ಸಂಬೋಧನಾ ರೂಪವಾಗಿ ಕೆಲಸ ಮಾಡದೆ ಉಲ್ಲೇಖ ರೂಪವಾಗಿ ಕಾರ್ಯನಿರ್ವಹಿಸುತ್ತಿದೆ.

- ನು.ರೂ. - ನಾನು (ನನಗೂ) (ಬಿ ೨)
  ತಿ.ರೂ - ನನಗೂ ಬಿಸ್ಕೆಟನ್ನು ತಿನ್ನಿಸು
  (ನನಗೂ) (ಬಿಸ್ಕೆಟನ್ನು ತಿನ್ನಿಸು)
  ನನಗೂ - ನಾ.ಗು.
  ಬಿಸ್ಕೆಟನ್ನು ತಿನ್ನಿಸು - ಕ್ರಿ.ಗು.

(ಸಂದರ್ಭ: ತನ್ನ ಅಣ್ಣನಿಗೆ ಬಿಸ್ಕೆಟನ್ನು ತಿನ್ನಿಸುವಾಗ ಮಗು ನನಗೂ ಹಾಗೆಯೇ ತಿನ್ನಿಸು ಎಂದು ಬಾಯ್ತೆರೆದು ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಛದಲ್ಲಿನ ಸರ್ವನಾಮವನ್ನು ನುಡಿದಿದೆ. 'ನನಗೂ' ಎನ್ನುವ ಬದಲಾಗಿ 'ನಾನು' ಎಂದು ನುಡಿದಿದೆ.

ಸಾರಾಂಶ

- ಸಾಮಾನ್ಯವಾಗಿ ಮಕ್ಕಳು ಒಂದು ವರ್ಷ ನಾಲ್ಕು ತಿಂಗಳುಗಳ ವಯೋಮಾನದಲ್ಲಿ ಪದಗಳ ಮೂಲಕ ಭಾವನೆಗಳನ್ನು ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವನ್ನು ಪಡೆದಿರುತ್ತಾರೆ. ಈ ಪದಗಳು ಹೆಚ್ಚಾಗಿ ನಾಮಪದಗಳೇ ಆಗಿರುತ್ತವೆ. ಈ ನಾಮಪದಗಳು ಕೂಡ ಸಂಬಂಧವನ್ನು ಸೂಚಿಸುವ 'ಅಮ್ಮ, ಅಪ್ಪ, ಅಣ್ಣ, ಅಕ್ಕ, ಅಮ್ಮಿ, ಅಪ್ಪಿ, ಆಂಟಿ' ಮುಂತಾದ ಸಂಬೋಧನಾ ರೂಪಗಳಾಗಿರುತ್ತವೆ ಮತ್ತು 'ಬಾ, ತಗ, ತಾ' ಎನ್ನುವ ಕ್ರಿಯಾಧಾತುಗಳನ್ನು ಬಳಸುತ್ತಾರೆ.
- ಮಕ್ಕಳು ಸುಮಾರು ಒಂದೂವರೆ ವರ್ಷ ಅಥವಾ ಹದಿನೆಂಟು ತಿಂಗಳುಗಳ ವಯೋಮಾನದಲ್ಲಿ ತಾವು ಗ್ರಹಿಸಿದ್ದನ್ನು ಪದಗಳ ಮೂಲಕ ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ. ಅಲ್ಲದೆ, ಪದಗಳ ನಡುವಿನ ನಿಯತವನ್ನು ಇಲ್ಲಿ ಗುರುತಿಸಬಹುದಾಗಿದೆ. ಹಾಗಾಗಿ ಈ ವಯೋಮಾನವನ್ನು ರಚನಾ ಕೌಶಲ್ಯಗಳನ್ನು ಅಭಿವ್ಯಕ್ತಿಗೊಳಿಸುವ ಆರಂಭಿಕ ಹಂತ ಎಂದು ಕರೆಯಬಹುದಾಗಿದೆ. ಈ ಅವಧಿಯಲ್ಲಿ ಮಕ್ಕಳು ನೂರಕ್ಕೂ ಹೆಚ್ಚು ಪದಗಳನ್ನು ಅಭಿವ್ಯಕ್ತಿಗೊಳಿಸುತ್ತಾರೆ. ಈ ಪದಗಳೂ ಕೂಡ ಹೆಚ್ಚಾಗಿ ನಾಮಪದ, ಸರ್ವನಾಮ, ಕ್ರಿಯಾಪದಗಳನ್ನೊಳಗೊಂಡಂತಹ ಪದಗಳಾಗಿರುತ್ತವೆ.
- ಈ ಅವಧಿಯಲ್ಲಿ ನಾಮಪದಗಳ ಬೆಳವಣಿಗೆಯು ಬಳಕೆಯ ನೆಲೆಯಲ್ಲಿ ಹೆಚ್ಚಾಗಿರುತ್ತದೆ. ನಾಮಪದಗಳಿಗೆ ಹೋಲಿಸಿದಾಗ ಕ್ರಿಯಾಪದ ಮತ್ತು ಸರ್ವನಾಮಗಳ ಸಂಖ್ಯೆಯು ಬಳಕೆಯ ನೆಲೆಯಲ್ಲಿ ನಿಧಾನಗತಿಯಲ್ಲಿ ಬೆಳವಣಿಗೆಯಾಗುತ್ತವೆ.
- ಮಕ್ಕಳು ಒಂದು ಪದವನ್ನು ನುಡಿಯುವ ಹಂತದಲ್ಲಿ 'ತಾ, ತಗ, ಬಾ,ಕೂಡು' ಎನ್ನುವ ಕ್ರಿಯಾಧಾತುಗಳನ್ನು ನುಡಿಯುತ್ತಾರೆ. ಇವು ವಿಧ್ಯರ್ಥಕ ರೂಪದಲ್ಲಿ ಬಳಕೆಯಾಗುತ್ತವೆ.
- ನಾಮಪದ, ಸರ್ವನಾಮ, ಕ್ರಿಯಾಧಾತುಗಳನ್ನೊಳಗೊಂಡ ಎಲ್ಲಾ ನಿದರ್ಶನಗಳೂ ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದಗಳಾಗಿವೆ. ಸಂದರ್ಭಾನುಸಾರವಾಗಿ ಕೆಲವು ವೇಳೆ ಮಕ್ಕಳು ನಾಮಪದ ಗುಚ್ಛಕ್ಕೆ ಸೇರಿದ ಪದಗಳನ್ನು ಅಭಿವ್ಯಕ್ತಿಗೊಳಿಸುತ್ತಾರೆ. ಆದರೆ ಅವುಗಳ ಪ್ರಮಾಣ ಕಡಿಮೆಯಾಗಿರುತ್ತದೆ. ಆದ ಕಾರಣ ಏಕಪದಗಳ ಆರಂಭಿಕ ಹಂತದಲ್ಲಿ ಮಕ್ಕಳು ವಾಕ್ಯದಲ್ಲಿನ ಕ್ರಿಯಾಪದ ಗುಚ್ಛಕ್ಕೆ ಸೇರಿದ ನಾಮಪದ, ಸರ್ವನಾಮ ಮತ್ತು ಕ್ರಿಯಾಧಾತುಗಳನ್ನು ಅಭಿವ್ಯಕ್ತಿಗೊಳಿಸುತ್ತಾರೆ. ಮಕ್ಕಳು ವಾಕ್ಯದಲ್ಲಿನ ಕೇವಲ ಒಂದು ಪದವನ್ನು ನುಡಿದರೂ ವಾಕ್ಯದ ಉಳಿದ ಭಾಗ ಅಂತಸ್ಥದಲ್ಲಿರುತ್ತದೆ. ಮಕ್ಕಳು ವಾಕ್ಯದ ನಿಯಮಗಳನ್ನು ಅಮೂರ್ತವಾಗಿ ಪೂರ್ಣರೂಪದಲ್ಲಿ ಪಡೆದುಕೊಂಡಿರುತ್ತಾರೆ. ಅದನ್ನು ಅಭಿವ್ಯಕ್ತಿಗೊಳಿಸುವಲ್ಲಿಯೂ ನಿಯಮಬದ್ಧತೆಯನ್ನು ಅನುಸರಿಸುತ್ತಾರೆ.

# ಎರಡು ಮತ್ತು ಎರಡಕ್ಕಿಂತ ಹೆಚ್ಚಿನ ಪದಗಳನ್ನು ಒಳಗೊಂಡ ವಾಕ್ಯಗಳು

ಈ ಅಧ್ಯಾಯದಲ್ಲಿ ಎರಡು, ಎರಡಕ್ಕಿಂತ ಹೆಚ್ಚಿನ ಪದಗಳು ನಾಮಪದ, ಕ್ರಿಯಾಪದಗಳು ಎರಡು ನಾಮಪದಗಳು, ಎರಡಕ್ಕಿಂತ ಹೆಚ್ಚಿನ ಕ್ರಿಯಾಪದಗಳು ಆಗಿದ್ದು, ಅವು ನಾಮಪದ ಗುಚ್ಛಕ್ಕೆ ಸೇರಿದವುಗಳೊ; ಅಥವಾ ಕ್ರಿಯಾಪದ ಗುಚ್ಛಕ್ಕೆ ಸೇರಿದವುಗಳೋ; ಅಥವಾ ಎರಡೂ ಗುಚ್ಛಕ್ಕೆ ಸೇರಿದ ಪದಗಳೋ ಎನ್ನುವುದನ್ನು ಕೆಲವು ನಿದರ್ಶನಗಳ ಮೂಲಕ ತಿಳಿಯಬಹುದಾಗಿದೆ ಮತ್ತು ಇವುಗಳು ಅಂತಸ್ಥ ರೂಪಕ್ಕೆ ತಕ್ಕಂತೆ ಬಳಕೆ ರೂಪವು ನಿಯಮಬದ್ಧವಾಗಿ ಇರುತ್ತವೆಯೇ ಎಂಬುದನ್ನು ತಿಳಿಯಬಹುದಾಗಿದೆ.

**೫.೧. ನಾಮಪದ ಮತ್ತು ಕ್ರಿಯಾಪದಗಳನ್ನೊಳಗೊಂಡ ವಾಕ್ಯಗಳು**

- ನು.ರೂ. - ತಾಲಿ ಆತು (ಬಿ ೧)
  ತಿ.ರೂ. - ಬಿಸ್ಕೆಟ್ ಖಾಲಿ ಆಯ್ತು
  (ಬಿಸ್ಕೆಟ್) (ಖಾಲಿ ಆಯ್ತು)
  ಬಿಸ್ಕೆಟ್ - ನಾ.ಗು.
  ಖಾಲಿ ಆಯ್ತು - ಕ್ರಿ.ಗು.

(ಸಂದರ್ಭ: (ತಾಲಿ-ಖಾಲಿ) ಬಿಸ್ಕೆಟ್ ಪಾಕೇಟ್‌ನಲ್ಲಿ ಇರುವ ಬಿಸ್ಕೆಟ್ ಖಾಲಿ ಆದಾಗ ಮಗು ಮೇಲಿನ ಮಾತನ್ನು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದಗಳನ್ನು ನುಡಿಯುವ ಮೂಲಕ ವಾಕ್ಯವನ್ನು ಸಂವಹನಗೊಳಿಸಿದೆ.

- ನು.ರೂ. - ಆಪು ತಗ (ಬಿ ೨)
  ತಿ.ರೂ. - ಅಣ್ಣ ನೀನು ಸೋಪು ತಗ
  (ನೀನು) (ಸೋಪು ತಗ)
  ನೀನು - ನಾ.ಗು.
  ಸೋಪು ತಗ - ಕ್ರಿ.ಗು.

(ಸಂದರ್ಭ: (ಆಪು-ಸೋಪು) ತನ್ನ ಅಮ್ಮ ಅಣ್ಣನಿಗೆ ಸೋಪು ಕೊಡು ಎಂದು ಹೇಳಿದಾಗ ಮಗು ತನ್ನ ಅಣ್ಣನಿಗೆ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ನಾಮಪದ ಮತ್ತು ಕ್ರಿಯಾಪದಗಳನ್ನು ನುಡಿದಿದೆ.

- ನು.ರೂ. - ಅಮ್ಮ ಬ್ರೂ ತಾ (ಬಿ ೫)
  ತಿ.ರೂ. - ನೀನು ನನಗೆ ನೀರು ತಾ
  (ನೀನು) (ನನಗೆ ನೀರು ತಾ)
  ನೀನು - ನಾ.ಗು.
  ನನಗೆ ನೀರು ತಾ - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನನ್ನು ನೀರು ಕೊಡು ಎಂದು ಕೇಳುತ್ತದೆ. )

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದಗಳನ್ನು ನುಡಿದಿದೆ.

- ನು.ರೂ. - ಅಮ್ಮ ಪಾಪಿ ಬೇಕು (ಬಿ ೪)
  ತಿ.ರೂ. - ನನಗೆ ಕಾಫಿ ಬೇಕು
  (ನನಗೆ) (ಕಾಫಿ ಬೇಕು)
  ನನಗೆ - ನಾ.ಗು.
  ಕಾಫಿ ಬೇಕು - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನಿಗೆ ಕಾಫಿ ಬೇಕು ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ನಾಮಪದ ಮತ್ತು ಕ್ರಿಯಾಪದವನ್ನು ನುಡಿದಿದೆ.

- ನು.ರೂ. - ಅಲ್ಲಿ ಐತೆ (ಬಿ ೨)
  ತಿ.ರೂ. - ನಿನ್ನ ಪೆನ್ ಅಲ್ಲಿ ಇದೆ
  (ನಿನ್ನ ಪೆನ್) (ಅಲ್ಲಿ ಇದೆ)
  ನಿನ್ನ ಪೆನ್ - ನಾ.ಗು.
  ಅಲ್ಲಿ ಇದೆ - ಕ್ರಿ.ಗು.

(ಸಂದರ್ಭ: (ಐತೆ-ಇದೆ) ಮಗುವಿನ ಆಂಟಿ ತನ್ನ ಪೆನ್ ಎಲ್ಲಿ ಎಂದು ಕೇಳಿ ಹುಡುಕುವಾಗ ಮಗು ಮೇಲಿನ ಮಾತನ್ನು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಅಲ್ಲಿ' ಎನ್ನುವ ಸರ್ವನಾಮವನ್ನು 'ಇದೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ. 'ಐತೆ' ಎನ್ನುವಲ್ಲಿ ಮಗು ನಿರ್ದಿಷ್ಟ ಪ್ರದೇಶದ ಆಡುಭಾಷೆಯನ್ನು ನುಡಿದಿದೆ.

- ನು.ರೂ. - ಪಾಮು ಐತೆ (ಬಿ ೨)
  ತಿ.ರೂ. - ನೆಲದ ಮೇಲೆ ಹುಳು ಇದೆ
  (ನೆಲದ ಮೇಲೆ) (ಹುಳು ಇದೆ)
  ನೆಲದ ಮೇಲೆ - ನಾ.ಗು.
  ಹುಳು ಇದೆ - ಕ್ರಿ.ಗು.

(ಸಂದರ್ಭ: (ಪಾಮು-ಹುಳು) ಮಗು ನೆಲದ ಮೇಲೆ ಹೋಗುತ್ತಿರುವ ಹುಳುವನ್ನು ತೋರಿಸಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛದಲ್ಲಿನ ನಾಮಪದ ಮತ್ತು ಕ್ರಿಯಾಪದವನ್ನು ನುಡಿದಿದೆ. 'ಹುಳು' ಎನ್ನುವ ನಾಮಪದಕ್ಕೆ ಬದಲಾಗಿ ಮಗು 'ಪಾಮು' ಎನ್ನುವ ಶಿಶುಭಾಷೆಯನ್ನು ರೂಢಿಸಿಕೊಂಡಿದೆ.

- ನು.ರೂ. - ಪಾಪಿ ಆಯ್ತು (ಬಿ ೪)
  ತಿ.ರೂ. - ನಾನು ಕಾಫಿ ಕುಡಿದು ಆಯ್ತು
  (ನಾನು) (ಕಾಫಿ ಕುಡಿದು ಆಯ್ತು)
  ನಾನು - ನಾ.ಗು.
  ಕಾಫಿ ಕುಡಿದು ಆಯ್ತು - ಕ್ರಿ.ಗು.

(ಸಂದರ್ಭ: (ಪಾಪಿ-ಕಾಫಿ) 'ಕಾಫಿ ಆಯ್ತಾ' ಎಂದು ಕೇಳಿದಾಗ ಮಗು ಮೇಲಿನ ರೀತಿಯಲ್ಲಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಕಾಫಿ' ಎನ್ನುವ ನಾಮಪದವನ್ನು 'ಆಯ್ತು' ಎನ್ನುವ ಕ್ರಿಯಾಪದವನ್ನು ನುಡಿದಿದೆ. 'ಕಾಫಿ' ಎನ್ನುವಲ್ಲಿ 'ಪಾಪಿ' ಎನ್ನುವ ಶಿಶುಭಾಷೆಯನ್ನು ರೂಢಿಸಿಕೊಂಡಿದೆ.

- ನು.ರೂ. - ಅಮ್ಮ ಲಾಲಿ ಬಾ (೭೫)

  ತಿ.ರೂ. - ನೀನು ನನ್ನನ್ನು ತೊಟ್ಟಿಲಲ್ಲಿ ಮಲಗಿಸು ಬಾ

  ೧. ನೀನು ಬಾ
  (ನೀನು) (ಬಾ)

  ನೀನು - ನಾ. ಗು.

  ಬಾ - ಕ್ರಿ. ಗು.

  ೨. ನನ್ನನ್ನು ತೊಟ್ಟಿಲಲ್ಲಿ ಮಲಗಿಸು
  (ನನ್ನನ್ನು) (ತೊಟ್ಟಿಲಲ್ಲಿ ಮಲಗಿಸು)

  ನನ್ನನ್ನು - ನಾ.ಗು.

  ತೊಟ್ಟಿಲಲ್ಲಿ ಮಲಗಿಸು- ಕ್ರಿ.ಗು.

(ಸಂದರ್ಭ: ನಿದ್ದೆ ಬಂದಾಗ ಮಗು ತನ್ನ ಅಮ್ಮನಿಗೆ ಮೇಲಿನ ಮಾತನ್ನು ಹೇಳುತ್ತದೆ.)
ಮೇಲಿನ ಅಭಿವ್ಯಕ್ತಿಯಲ್ಲಿ ಎರಡು ಸರಳ ವಾಕ್ಯಗಳನ್ನು ಬಳಸಿದ ಸಂಕೀರ್ಣ ರಚನೆಯನ್ನು ಕಾಣಬಹುದು.

೫.೨. ವಿಶೇಷಣ ಮತ್ತು ವಿಶೇಷ್ಯಗಳನ್ನು ಒಳಗೊಂಡ ವಾಕ್ಯಗಳು

ವಿಶೇಷಣವು ನಾಮಪದದ ಹಿಂದೆ ಬರಬೇಕು ಎನ್ನುವುದು ಕನ್ನಡ ವಾಕ್ಯದ ನಿಯಮ. ಇದನ್ನು ಮಕ್ಕಳು ಅನುಸರಿಸುವ ಕ್ರಮ ಮತ್ತು ಅಂತಸ್ಥ ರೂಪಕ್ಕೆ ತಕ್ಕ ಹಾಗೆ ಅಭಿವ್ಯಕ್ತಿಯು ನಿಯಮಬದ್ಧವಾಗಿರುತ್ತದೆಯೇ; ಎಂಬುದನ್ನು ಕೆಲವು ನಿದರ್ಶನಗಳ ಮೂಲಕ ತಿಳಿಯಬಹುದು.

- ನು.ರೂ. - ತೊತ್ತು ಅಂಬ (ಬಿ ೨)
  ತಿ.ರೂ. - ಅಲ್ಲಿ ದೊಡ್ಡ ಆಕಳು ಇದೆ
  (ಅಲ್ಲಿ) **(ದೊಡ್ಡ ಆಕಳು ಇದೆ)**
  ಅಲ್ಲಿ - ನಾ.ಗು.
  ದೊಡ್ಡ ಆಕಳು ಇದೆ - ಕ್ರಿ.ಗು.

(ಸಂದರ್ಭ: (ತೊತ್ತು-ದೊಡ್ಡ) ಮಗು ಮನೆಯ ಮುಂದೆ ನಿಂತಿರುವ ಆಕಳನ್ನು ನೋಡಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ದೊಡ್ಡ' ಎನ್ನುವ ವಿಶೇಷಣವನ್ನು 'ಆಕಳು' ಎನ್ನುವ ನಾಮಪದವನ್ನು ನುಡಿದಿದೆ. 'ದೊಡ್ಡ' ಎಂಬ ಪದದ ಬದಲಾಗಿ 'ತೊತ್ತು' ಎಂದು 'ಆಕಳು' ಎಂಬ ಪದದ ಬದಲಾಗಿ 'ಅಂಬ' ಎನ್ನುವ ಶಿಶುಭಾಷೆಯ ಪದರೂಪಗಳನ್ನು ರೂಢಿಸಿಕೊಂಡಿದೆ.

- ನು.ರೂ. - ಚಣ್ಣ ಪಾಪು (ಬಿ ೫)
  ತಿ.ರೂ. - ಇದು ಚಿಕ್ಕ ಬೊಂಬೆ ಆಗಿದೆ
  (ಇದು ) **(ಚಿಕ್ಕ ಬೊಂಬೆ ಆಗಿದೆ)**
  ಇದು - ನಾ.ಗು.
  ಚಿಕ್ಕ ಬೊಂಬೆ ಆಗಿದೆ - ಕ್ರಿ.ಗು.

(ಸಂದರ್ಭ: ಚಿಕ್ಕ ಬೊಂಬೆಯನ್ನು ತೋರಿಸಿ 'ಇದು ಚಿಕ್ಕ ಪಾಪನಾ ಅಥವಾ ದೊಡ್ಡ ಪಾಪನಾ' ಎಂದು ಕೇಳಿದಾಗ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಚಿಕ್ಕ' ಎನ್ನುವ ವಿಶೇಷಣವನ್ನು 'ಪಾಪು' ಎನ್ನುವ ನಾಮಪದವನ್ನು ನುಡಿದಿದೆ. 'ಚಣ್ಣ' ಎನ್ನುವಲ್ಲಿ ಆಡುಭಾಷೆಯ ರೂಪವನ್ನು ರೂಢಿಸಿಕೊಂಡಿದೆ.

- ನು.ರೂ. - ಸಣ್ಣ ಪಿನ್ನು (ಬಿ ೪)
  ತಿ.ರೂ. - ಬಾಕ್ಸ್‌ನಲ್ಲಿ ಸಣ್ಣ ಪಿನ್ನು ಇದೆ
  (ಬಾಕ್ಸ್‌ನಲ್ಲಿ) **(ಸಣ್ಣ ಪಿನ್ನು ಇದೆ)**
  ಬಾಕ್ಸ್‌ನಲ್ಲಿ - ನಾ.ಗು.
  ಸಣ್ಣಪಿನ್ನು ಇದೆ - ಕ್ರಿ.ಗು.

(ಸಂದರ್ಭ: ಮಗು ಬಾಕ್ಸ್‌ನಲ್ಲಿರುವ ಪಿನ್‌ಗಳಲ್ಲಿ ಚಿಕ್ಕದೊಂದನ್ನು ತೆಗೆದುಕೊಂಡು ಮೇಲಿನ ರೀತಿ ಹೇಳುತ್ತದೆ.)
ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ವಿಶೇಷಣ ಮತ್ತು ನಾಮಪದವನ್ನು ನುಡಿದಿದೆ.

- ನು.ರೂ. - ಬಿಲಿ ಅನ್ನ (ಸಿ ೧)
  ತಿ.ರೂ. - ನನಗೆ ಬಿಳಿ ಅನ್ನ ಹಾಕು
  (ನನಗೆ) (ಬಿಳಿ ಅನ್ನ ಹಾಕು)
  ನನಗೆ - ನಾ.ಗು.
  ಬಿಳಿ ಅನ್ನ ಹಾಕು - ಕ್ರಿ.ಗು.

(ಸಂದರ್ಭ: ಮಗುವಿನ ತಾಯಿ ಮಗುವನ್ನು ಕುರಿತು ನಿನಗೆ 'ಬಿಳಿ ಅನ್ನ ಹಾಕಬೇಕೋ; ಅಥವಾ ಚಿತ್ರಾನ್ನ ಹಾಕಬೇಕೋ' ಎಂದು ಕೇಳಿದಾಗ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಬಿಳಿ' ಎನ್ನುವ ವಿಶೇಷಣ ಮತ್ತು 'ಅನ್ನ' ಎನ್ನುವ ನಾಮಪದವನ್ನು ನುಡಿದಿದೆ.

- ನು.ರೂ. - ಕೆಂಪು ಗುಬುಲಿ (ಸಿ ೨)

  ತಿ.ರೂ. - ಇದು ಕೆಂಪು ಗುಲಾಬಿ ಹೂ ಆಗಿದೆ

  (ಇದು) (**ಕೆಂಪು ಗುಲಾಬಿ ಹೂ ಆಗಿದೆ**)

  ಇದು - ನಾ.ಗು.

  ಕೆಂಪು ಗುಲಾಬಿ ಹೂ ಆಗಿದೆ - ಕ್ರಿ.ಗು.

(ಸಂದರ್ಭ: ಇದು ಯಾವ ಕಲರ್ ಗುಲಾಬಿ ಹೂ ಎಂದು ಕೇಳಿದಾಗ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ ಬಣ್ಣ ಸೂಚಿಸುವ ವಿಶೇಷಣವನ್ನು ಮತ್ತು ವಿಶೇಷ್ಯವನ್ನು ನುಡಿದಿದೆ. 'ಗುಲಾಬಿ' ಎನ್ನುವ ಪದಕ್ಕೆ ಬದಲಾಗಿ 'ಗುಬುಲಿ' ಎಂದು ನುಡಿದಿದೆ.

- ನು.ರೂ. - ನಂತಗ ಎಲ್ಲೋ ಪೆನ್ ಐತೆ (ಡಿ ೧)

  ತಿ.ರೂ. - ನನ್ನ ಬಳಿ ಎಲ್ಲೋ ಪೆನ್ ಇದೆ

  (**ನನ್ನ ಬಳಿ**) (**ಎಲ್ಲೋ ಪೆನ್ ಇದೆ**)

  ನನ್ನ ಬಳಿ - ನಾ.ಗು.

  ಎಲ್ಲೋ ಪೆನ್ ಇದೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಗೆಳೆಯನಿಗೆ ತನ್ನ ಬಳಿ ಎಲ್ಲೋ (ಎಲ್ಲೋ - ಹಳದಿ) ಪೆನ್ ಇದೆ ಎಂದು ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ ಪದವನ್ನು ಮತ್ತು ಕ್ರಿಯಾಪದ ಗುಚ್ಚಕ್ಕೆ ಸೇರಿದ ವಿಶೇಷಣ ಮತ್ತು ವಿಶೇಷ್ಯವನ್ನು ನುಡಿದಿದೆ.

- ನು.ರೂ. - ನಂಗೆ ಗುಂಡನ ಚಪಾತಿ ಬೇಕು (ಸಿ ೩)

  ತಿ.ರೂ. - ನನಗೆ ಗುಂಡಗೆ ಇರುವ ಚಪಾತಿ ಬೇಕು

  (**ನನಗೆ**) (**ಗುಂಡಗೆ ಇರುವ ಚಪಾತಿ ಬೇಕು**)

  ನನಗೆ - ನಾ.ಗು.

  ಗುಂಡಗೆ ಇರುವ ಚಪಾತಿ ಬೇಕು - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನಿಗೆ ಗುಂಡಗೆ ಇರುವ ಚಪಾತಿ ಬೇಕು ಎಂದು ಕೇಳುತ್ತದೆ.)

ಮಗು 'ನನಗೆ' ಎನ್ನುವ ನಾಮಪದ ಗುಚ್ಚವನ್ನು ಮತ್ತು 'ಗುಂಡಾಗಿ ಇರುವ ಚಪಾತಿ ಬೇಕು' ಎನ್ನುವ ಕ್ರಿಯಾಪದ ಗುಚ್ಚವನ್ನು ನುಡಿಯುವ ಮೂಲಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

೫.೩. ನಾಮಪದ ಮತ್ತು ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದಗಳನ್ನು ಒಳಗೊಂಡ ವಾಕ್ಯಗಳು

ನಾಮಪದ ಮತ್ತು ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದಗಳನ್ನು ಇಲ್ಲಿ ಕಾಣಬಹುದಾಗಿದೆ.

- ನು.ರೂ. - ಅಮ್ಮ ಮಮ್ಮು (ಬಿ ೧)
  ತಿ.ರೂ. - ಅಮ್ಮ ಅಡುಗೆ ಮಾಡುತ್ತಿದ್ದಾರೆ
  (ಅಮ್ಮ) (ಅಡುಗೆ ಮಾಡುತ್ತಿದ್ದಾರೆ)
  ಅಮ್ಮ - ನಾ.ಗು.
  ಅಡುಗೆ ಮಾಡುತ್ತಿದ್ದಾರೆ - ಕ್ರಿ.ಗು.

(ಸಂದರ್ಭ: (ಮಮ್ಮು-ಅಡುಗೆ) ನಿಮ್ಮ ಅಮ್ಮ ಏನು ಮಾಡುತ್ತಾ ಇದ್ದಾರೆ ಎಂದು ಮಗುವನ್ನು ಕೇಳಿದಾಗ ಮೇಲಿನ ರೀತಿ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಅಮ್ಮ' ಎನ್ನುವ ಪದವನ್ನು ಮತ್ತು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಮಮ್ಮು' ಎನ್ನುವ ನಾಮಪದವನ್ನು ನುಡಿಯುವ ಮೂಲಕ ವಾಕ್ಯವನ್ನು ಪ್ರತಿನಿಧಿಸುತ್ತಿದೆ.

- ನು.ರೂ. - ಅಪ್ಪ ಆಚೆ (ಬಿ ೪)
  ತಿ.ರೂ. - ಅಪ್ಪ ಆಚೆ ಹೋದರು
  (ಅಪ್ಪ) (ಆಚೆ ಹೋದರು)
  ಅಪ್ಪ - ನಾ.ಗು.
  ಆಚೆ ಹೋದರು - ಕ್ರಿ.ಗು.

(ಸಂದರ್ಭ: ಅಪ್ಪ ಎಲ್ಲಿ ಹೋದರು ಎಂದು ಮಗುವಿನ ಆಂಟಿ ಕೇಳಿದಾಗ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ ನಾಮಪದವನ್ನು ಮತ್ತು ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದವನ್ನು ನುಡಿದಿದೆ.

- ನು.ರೂ. - ಅಮ್ಮ ಅಕ್ಕ ಬಿಚ್ಚಿ ( ಬಿ ೨)
  ತಿ.ರೂ. - ಅಕ್ಕ ನನಗೆ ಬಿಸ್ಕೆಟ್ ಕೊಟ್ಟರು
  (ಅಕ್ಕ) (ನನಗೆ ಬಿಸ್ಕೆಟ್ ಕೊಟ್ಟರು)
  ಅಕ್ಕ - ನಾ.ಗು.
  ನನಗೆ ಬಿಸ್ಕೆಟ್ ಕೊಟ್ಟರು - ಕ್ರಿ.ಗು.

(ಸಂದರ್ಭ: ಮಗುವಿಗೆ ಬಿಸ್ಕೆಟ್ ಕೊಟ್ಟಾಗ ಮಗು ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಅಕ್ಕ' ಎನ್ನುವ ಪದವನ್ನು ಮತ್ತು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಬಿಚ್ಚಿ' ಎನ್ನುವ ನಾಮಪದವನ್ನು ನುಡಿದಿದೆ.

- ನು.ರೂ. - ಅಣ್ಣ ನಾನು ಅತ್ತೆ (ಬಿ ೨)
  ತಿ.ರೂ. - ನಾನು ಅತ್ತೆಯ ಮನೆಗೆ ಬರುತ್ತೇನೆ
  (ನಾನು) (ಅತ್ತೆಯ ಮನೆಗೆ ಬರುತ್ತೇನೆ)
  ನಾನು - ನಾ.ಗು.
  ಅತ್ತೆಯ ಮನೆಗೆ ಬರುತ್ತೇನೆ - ಕ್ರಿ.ಗು.

(ಸಂದರ್ಭ: ಮಗುವಿನ ಅಣ್ಣ ತನ್ನ ಅತ್ತೆಯ ಮನೆಗೆ ಹೋಗುವಾಗ ತಾನೂ ಬರುತ್ತೇನೆ ಎಂದು ಮಗು ತನ್ನ ಅಣ್ಣನನ್ನು ಕೇಳುತ್ತದೆ.)

ಮಗು ನಾಮಪದ ಮತ್ತು ಕ್ರಿಯಾಪದ ಗುಚ್ಛಗಳಿಗೆ ಸೇರಿದ ಪದಗಳನ್ನು ನುಡಿದಿದೆ.

- ನು.ರೂ. - ಅಮ್ಮ ಅನ್ನ ಅತ್ತೆ ( ಬಿ ೨)

  ತಿ.ರೂ. - ಅಣ್ಣ ಅತ್ತೆಯ ಮನೆಗೆ ಹೋದನು

  (ಅಣ್ಣ) (ಅತ್ತೆಯ ಮನೆಗೆ ಹೋದನು)

  ಅಣ್ಣ - ನಾ.ಗು.

  ಅತ್ತೆಯ ಮನೆಗೆ ಹೋದನು - ಕ್ರಿ.ಗು.

(ಸಂದರ್ಭ: ತನ್ನ ಅಣ್ಣ ತನ್ನನ್ನು ಬಿಟ್ಟು ಅತ್ತೆಯ ಮನೆಗೆ ಹೋದಾಗ ಮಗು ಮೇಲಿನ ಮಾತನ್ನು ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ 'ಅಣ್ಣ' ಎನ್ನುವ ಪದವನ್ನು ಮತ್ತು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಅತ್ತೆ' ಎನ್ನುವ ನಾಮಪದವನ್ನು ನುಡಿದಿದೆ.

- ನು.ರೂ. - ಅಕ್ಕ ಅನ್ನ ಅತ್ತೆ (ಬಿ ೨)

  ತಿ.ರೂ. - ಅಣ್ಣ ಅತ್ತೆಯ ಮನೆಗೆ ಹೋಗಿ ಬಂದ

  (ಅಣ್ಣ) (ಅತ್ತೆಯ ಮನೆಗೆ ಹೋಗಿ ಬಂದ)

  ಅಣ್ಣ - ನಾ.ಗು.

  ಅತ್ತೆಯ ಮನೆಗೆ ಹೋಗಿ ಬಂದ - ಕ್ರಿ.ಗು.

(ಸಂದರ್ಭ: ತನ್ನ ಅಣ್ಣ ತನ್ನನ್ನು ಬಿಟ್ಟು ಅತ್ತೆಯ ಮನೆಗೆ ಹೋಗಿ ಬಂದಾಗ ಮಗು ಮೇಲಿನ ಮಾತನ್ನು ಹೇಳುತ್ತದೆ.)

ಮಗು ನಾಮಪದ ಮತ್ತು ಕ್ರಿಯಾಪದ ಗುಚ್ಚಗಳಿಗೆ ಸೇರಿದ ಪದಗಳನ್ನು ನುಡಿದಿದೆ.

(ಮೇಲಿನ ಮೂರು ನಿದರ್ಶನಗಳನ್ನು ಮಗುವೊಂದು ಕೇವಲ ಅರ್ಧ ಗಂಟೆಗಳ ಸಮಯದಲ್ಲಿ ನುಡಿದಿದೆ.)

- ನು.ರೂ. - ಅಕ್ಕ ಮಮ್ಮ ಅಮ್ಮ ಹತ್ತ (ಬಿ ೧)

  ತಿ.ರೂ. - ಅಮ್ಮ ಊಟ ಮಾಡದಿದ್ದರೆ ಹತ್ತ ಮಾಡುತ್ತಾರೆ

  (ಅಮ್ಮ) (ಊಟ ಮಾಡದಿದ್ದರೆ ಹತ್ತ ಮಾಡುತ್ತಾರೆ)

  ಅಮ್ಮ - ನಾ.ಗು.

  ಊಟ ಮಾಡದಿದ್ದರೆ ಹತ್ತ ಮಾಡುತ್ತಾರೆ - ಕ್ರಿ.ಗು.

(ಸಂದರ್ಭ: ತನ್ನ ಅಮ್ಮ ಊಟ ಮಾಡಲು ಕರೆದಾಗ ಮಗು ಮೇಲಿನ ಮಾತನ್ನು ಮಾಹಿತಿ ಸಂಗ್ರಹಕಾರರಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ 'ಅಮ್ಮ' ಎನ್ನುವ ಪದವನ್ನು ಮತ್ತು 'ಊಟ ಮಾಡದಿದ್ದರೆ ಹತ್ತ ಮಾಡುತ್ತಾರೆ' ಎನ್ನುವ ಕ್ರಿಯಾಪದ ಗುಚ್ಚವನ್ನು ನುಡಿದಿದೆ. ಇಲ್ಲಿ 'ಹತ್ತ' ಎನ್ನುವುದು ಹೊಡೆತ ಎನ್ನುವ ಅರ್ಥದಲ್ಲಿ ಇರುವ ನಾಮಪದವಾಗಿದೆ.

- ನು.ರೂ. - ಈಚಿ ಬಾಚಿ ಇನ್ಸಾ (ಸಿ ೨)

  ತಿ.ರೂ. - ಬೆಕ್ಕು ಇಲಿಯನ್ನು ಬಾಯಲ್ಲಿ ಹೀಗೆ ಹಿಡಿದುಕೊಂಡಿತ್ತು

  (ಬೆಕ್ಕು) (ಇಲಿಯನ್ನು ಬಾಯಲ್ಲಿ ಹೀಗೆ ಹಿಡಿದುಕೊಂಡಿತ್ತು)

  ಬೆಕ್ಕು - ನಾ.ಗು.

  ಇಲಿಯನ್ನು ಬಾಯಲ್ಲಿ ಹೀಗೆ ಹಿಡಿದುಕೊಂಡಿತ್ತು - ಕ್ರಿ.ಗು.

(ಸಂದರ್ಭ: (ಈಚಿ-ಇಲಿಚಿ, ಬಾಚಿ-ಬಾಯಲ್ಲಿ, ಇನ್ಸಾ-ಹೀಗೆ) ಬೆಕ್ಕು ಬಾಯಲ್ಲಿ ಇಲಿಯನ್ನು ಹಿಡಿದುಕೊಂಡು ಓಡಿದ್ದನ್ನು ನೋಡಿದ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ನಾಮಪದಗಳನ್ನು ಮತ್ತು 'ಹೀಗೆ' ಎನ್ನುವ ಗುಣಪದವನ್ನು ನುಡಿದಿದೆ. ಆದರೆ ಮಗು ತನ್ನದೇ ಆದ ಆಡುಭಾಷೆಯ ಪದಗಳನ್ನು ವ್ಯಕ್ತಪಡಿಸಿದೆ.

- ನು.ರೂ. - ಅಮ್ಮ ಬಟ್ಟೆ ಇಸ್ಲಿ ಮಾಡು (ಬಿ ೪)

  ತಿ.ರೂ. - ನೀನು ಬಟ್ಟೆಯನ್ನು ಇಸ್ತ್ರಿ ಮಾಡು

  (ನೀನು) (**ಬಟ್ಟೆಯನ್ನು ಇಸ್ತ್ರಿ ಮಾಡು**)

  ನೀನು - ನಾ.ಗು.

  ಬಟ್ಟೆಯನ್ನು ಇಸ್ತ್ರಿ ಮಾಡು - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನಿಗೆ ಬಟ್ಟೆಗಳನ್ನು ಇಸ್ತ್ರಿ ಮಾಡುವಂತೆ ಹೇಳುತ್ತದೆ.)
ಮಗು 'ಬಟ್ಟೆಯನ್ನು ಇಸ್ತ್ರಿ ಮಾಡು' ಎನ್ನುವ ಕ್ರಿಯಾಪದ ಗುಚ್ಛವನ್ನು ನುಡಿದಿದೆ.

**ಸಾರಾಂಶ:**

- ಮಕ್ಕಳು ಎರಡು ಪದಗಳನ್ನು ನುಡಿಯುವ ಹಂತದಲ್ಲಿ ವಾಕ್ಯದಲ್ಲಿನ ಕ್ರಿಯಾಪದ ಗುಚ್ಛಕ್ಕೆ ಸೇರಿದ ಎರಡು ಪದಗಳನ್ನು ನುಡಿಯುತ್ತಾರೆ. ಅಲ್ಲದೆ, ನಾಮಪದ ಗುಚ್ಛಕ್ಕೆ ಸೇರಿದ ಪದವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದವನ್ನು ನುಡಿಯುತ್ತಾರೆ. ಸಾಮಾನ್ಯವಾಗಿ ಮಕ್ಕಳು ಒಂದು ವರ್ಷ ಏಳು ತಿಂಗಳ ವಯೋಮಾನದಲ್ಲೇ ಎರಡು ಪದಗಳನ್ನು ನುಡಿಯಲು ಆರಂಭಿಸುತ್ತಾರೆ.
- ಮಕ್ಕಳು ಎರಡು ಪದಗಳನ್ನು ನುಡಿಯುವ ಹಂತದಲ್ಲಿ ವಿಶೇಷಣ ಮತ್ತು ವಿಶೇಷ್ಯಗಳನ್ನು ಕ್ರಮಬದ್ಧವಾಗಿ ನುಡಿಯುತ್ತಾರೆ. ವಾಕ್ಯದಲ್ಲಿ ನಾಮ ವಿಶೇಷಣವು ನಾಮಪದದ ಹಿಂದೆ ಬರಬೇಕು ಎಂಬುದು ಕನ್ನಡ ಭಾಷೆಯ ನಿಯಮ. ಇದನ್ನು ಮಕ್ಕಳು ನಿಯಮಬದ್ಧವಾಗಿ ಪಾಲಿಸುತ್ತಾರೆ.
- ಮಕ್ಕಳು ಎರಡು ಮತ್ತು ಎರಡಕ್ಕಿಂತ ಹೆಚ್ಚಿನ ಪದಗಳನ್ನು ನುಡಿದಾಗಲೂ ವಾಕ್ಯವನ್ನು ಪೂರ್ಣ ರೂಪದಲ್ಲಿ ಪಡೆದುಕೊಂಡಿರುತ್ತಾರೆ ಮತ್ತು ಬಳಕೆ ರೂಪವು ಅಂತಸ್ಥ ನಿಯಮಕ್ಕೆ ಅನುಗುಣವಾಗಿ ನಿಯಮಬದ್ಧವಾಗಿರುತ್ತದೆ.

# ಕಾಲಸೂಚಕ ಮತ್ತು ಆಖ್ಯಾತ ಪ್ರತ್ಯಯಗಳನ್ನು ಪ್ರತಿನಿಧಿಸುವ ವಾಕ್ಯಗಳು

ಮಕ್ಕಳು ಕಾಲಸೂಚಕ ಪ್ರತ್ಯಯ ಮತ್ತು ಆಖ್ಯಾತ ಪ್ರತ್ಯಯಗಳನ್ನು ಬಳಸುವ ವಿಧಾನವನ್ನು ಮತ್ತು ವಾಕ್ಯಗಳಲ್ಲಿ ಕ್ರಿಯಾಧಾತುಗಳನ್ನು ಸ್ವತಂತ್ರವಾಗಿ ಬಳಸುತ್ತಾರೋ ಅಥವಾ ಕಾಲಸೂಚಕ ಮತ್ತು ಆಖ್ಯಾತ ಪ್ರತ್ಯಯಗಳನ್ನು ಬಳಸಿಕೊಂಡೇ ನುಡಿಯುತ್ತಾರೋ ಎನ್ನುವುದನ್ನು ಮುಂದಿನ ಕೆಲವು ನಿದರ್ಶನಗಳ ಮೂಲಕ ತಿಳಿಯಬಹುದು.

- ನು.ರೂ. - ಅಳು ದೂತ್ತಾಳೆ (ಬಿ ಳ)
  ತಿ.ರೂ. - ಅವಳು ನನ್ನನ್ನು ನೂಕುತ್ತಾಳೆ
  (**ಅವಳು**) (ನನ್ನನ್ನು **ನೂಕುತ್ತಾಳೆ**)
  ಅವಳು - ನಾ.ಗು.
  ನನ್ನನ್ನು ನೂಕುತ್ತಾಳೆ - ಕ್ರಿ.ಗು.

(ಸಂದರ್ಭ: ತನ್ನ ಅಕ್ಕ ಮನೆಗೆ ಬಂದರೆ ತನ್ನನ್ನು ನೂಕುತ್ತಾಳೆ ಎಂದು ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಛದಲ್ಲಿನ 'ಅವಳು' ಎನ್ನುವ ಪ್ರಥಮ ಪುರುಷ ಸರ್ವನಾಮವನ್ನು ಕ್ರಿಯಾಪದ ಗುಚ್ಛದಲ್ಲಿನ 'ನೂಕುತ್ತಾಳೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ. ಈ ಮೂಲಕ ಇಡೀ ವಾಕ್ಯವನ್ನು ಪ್ರತಿನಿಧಿಸಿದೆ. 'ದೂತ್ತಾಳೆ' ಎನ್ನುವಲ್ಲಿ ಮಗು ಕಾಲಸೂಚಕ ಮತ್ತು ಆಖ್ಯಾತ ಪ್ರತ್ಯಯವಿರುವ ಕ್ರಿಯಾಪದವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ - ಅಳು ಮುತ್ತು ಇಟ್ಟು (ಬಿ ಳ)
  ತಿ.ರೂ - ಅವಳು ನನಗೆ ಮುತ್ತು ಇಟ್ಟಳು
  (**ಅವಳು**) (ನನಗೆ **ಮುತ್ತು ಇಟ್ಟಳು**)
  ಅವಳು - ನಾ. ಗು.
  ನನಗೆ ಮುತ್ತು ಇಟ್ಟಳು - ಕ್ರಿ.ಗು.

(ಸಂದರ್ಭ: ಮಗು ತನ್ನ ಅಕ್ಕ ಮುತ್ತು ಕೊಟ್ಟಿದ್ದನ್ನು ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ ಅವಳು ಎನ್ನುವ ಪ್ರಥಮ ಪುರುಷ ಸರ್ವನಾಮವನ್ನು ನುಡಿದಿದೆ. ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಮುತ್ತು' ಎನ್ನುವ ನಾಮಪದವನ್ನು ನುಡಿದಿದೆ. 'ಇಟ್ಟಳು' ಎನ್ನುವ ಪದಕ್ಕೆ ಬದಲಾಗಿ 'ಇಟ್ಟು' ಎನ್ನುವ ರೂಪವನ್ನು ನುಡಿದಿದೆ.

- ನು.ರೂ - ತೋತಿ ಮೂರು ನಾಕು ಬಂದವ (ಬಿ ಖ)
  ತಿ.ರೂ - ಕೋತಿ ಮೂರುನಾಕು ಬಂದಿವೆ
  (**ಕೋತಿ**) (**ಮೂರುನಾಕು ಬಂದಿವೆ**)
  ಕೋತಿ - ನಾ.ಗು.
  ಮೂರುನಾಕು ಬಂದಿವೆ - ಕ್ರಿ.ಗು.

(ಸಂದರ್ಭ: ಮಗು ಮನೆಯ ಮುಂದೆ ಬಂದಿರುವ ಕೋತಿಗಳನ್ನು ನೋಡಿ ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಕೋತಿ' ಎನ್ನುವ ನಾಮಪದವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಬಂದಿವೆ' ಎನ್ನುವ ಭೂತಕಾಲ ರೂಪವನ್ನು ಸೂಚಿಸುವ ಕ್ರಿಯಾಪದವನ್ನು ನುಡಿಯುವ ಮೂಲಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. -ನಾನು ಬತ್ತಿ (ಬಿ ೨)
  ತಿ.ರೂ. - ನಾನು ಹೊರಗೆ ಬರುತ್ತೇನೆ
  **(ನಾನು) (ಹೊರಗೆ ಬರುತ್ತೇನೆ)**
  ನಾನು - ನಾ.ಗು.
  ಹೊರಗೆ ಬರುತ್ತೇನೆ - ಕ್ರಿ.ಗು.

(ಸಂದರ್ಭ: ತನ್ನ ಅಜ್ಜ ಹೊರಗೆ ಹೋಗುವಾಗ ಮಗು 'ನಾನು ಬರುತ್ತೇನೆ' ಎಂದು ಕೇಳುತ್ತದೆ. )

ಮಗು ನಾಮಪದ ಗುಚ್ಚಕ್ಕೆ ಸೇರಿದ 'ನಾನು' ಎನ್ನುವ ಸರ್ವನಾಮವನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಬತ್ತಿ' ಎನ್ನುವ ವರ್ತಮಾನ ಕಾಲಸೂಚಕ ಕ್ರಿಯಾಪದವನ್ನು ನುಡಿದಿದೆ. ಪೂರ್ಣ ಕ್ರಿಯಾಪದವನ್ನು ನುಡಿಯದೇ ಹೋದರೂ ಆ ರೂಪವನ್ನು ಹೊಂದುವ ಕ್ರಿಯಾಪದವನ್ನು ನುಡಿದಿದೆ. ಕೇವಲ ಕ್ರಿಯಾಧಾತುವೊಂದನ್ನೇ ನುಡಿದಿಲ್ಲ.

- ನು.ರೂ. - ನಾನು ಬಿದ್ದಿ (ಬಿ ೫)
  ತಿ.ರೂ. - ನಾನು ಕೆಳಗೆ ಬಿದ್ದೆ
  **(ನಾನು) (ಕೆಳಗೆ ಬಿದ್ದೆ)**
  ನಾನು - ನಾ.ಗು.
  ಕೆಳಗೆ ಬಿದ್ದೆ - ಕ್ರಿ.ಗು.

(ಸಂದರ್ಭ: ಆಟ ಆಡುವಾಗ ಬಿದ್ದ ಮಗು ತನ್ನ ಅಮ್ಮನಿಗೆ ಹೇಳುತ್ತದೆ. )

ಮಗು ನಾಮಪದ ಗುಚ್ಚಕ್ಕೆ ಸೇರಿದ 'ನಾನು' ಎನ್ನುವ ಸರ್ವನಾಮವನ್ನು ನುಡಿದಿದೆ. ಕ್ರಿಯಾಪದ ಗುಚ್ಚಕ್ಕೆ ಸೇರಿದ ಭೂತಕಾಲವನ್ನು ಸೂಚಿಸುವ 'ಬಿದ್ದೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ. ಮಗು ಪೂರ್ಣ ಕ್ರಿಯಾಪದವನ್ನು ನುಡಿಯದಿದ್ದರೂ ಅದು ಕೇವಲ ಧಾತುವಾಗಿರದೇ ಪೂರ್ಣ ಕ್ರಿಯಾಪದ ರೂಪದಲ್ಲಿದೆ.

- ನು.ರೂ. - ಅಚ್ಚ ಅವ್ವ ಬತ್ತೆ (ಬಿ ೨)
  ತಿ.ರೂ. - ಹರ್ಷ ಮತ್ತು ಅವ್ವ ಮನೆಗೆ ಬರುತ್ತಾರೆ
  **(ಹರ್ಷ ಮತ್ತು ಅವ್ವ) (ಮನೆಗೆ ಬರುತ್ತಾರೆ)**
  ಹರ್ಷ ಮತ್ತು ಅವ್ವ - ನಾ.ಗು.
  ಮನೆಗೆ ಬರುತ್ತಾರೆ - ಕ್ರಿ.ಗು

(ಸಂದರ್ಭ: ಮಗು ತನ್ನ ಅಪ್ಪನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ 'ಹರ್ಷ ಮತ್ತು ಅವ್ವ' ಎನ್ನುವ ನಾಮಪದಗಳನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ ಕ್ರಿಯಾಪದವನ್ನು 'ಬತ್ತೆ' ಎನ್ನುವ ಕ್ರಿಯಾರೂಪವನ್ನು ಉಚ್ಚರಿಸಿದೆ.

- ನು.ರೂ - ಗುಬುಲಿ ನೋಲಿ (ಸಿ ೨)
  ತಿ.ರೂ. - ನಾನು ಗುಲಾಬಿಯನ್ನು ನೋಡಿದ್ದೇನೆ
  (ನಾನು) **(ಗುಲಾಬಿಯನ್ನು ನೋಡಿದ್ದೇನೆ)**
  ನಾನು - ನಾ.ಗು.
  ಗುಲಾಬಿಯನ್ನು ನೋಡಿದ್ದೇನೆ- ಕ್ರಿ.ಗು.

(ಸಂದರ್ಭ: ಗುಲಾಬಿ ಹೂವನ್ನು ನೋಡಿದ್ದೀಯಾ ಎಂದು ಕೇಳಿದಾಗ ಮಗು ನೋಡಿದ್ದೇನೆ ಎಂದು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಗುಲಾಬಿ' ಎನ್ನುವ ಕರ್ಮಪದವನ್ನು 'ನೋಲಿ' ಎನ್ನುವ ಕ್ರಿಯಾಪದ ರೂಪವನ್ನು ಅಭಿವ್ಯಕ್ತಿಗೊಳಿಸಿದೆ.

• ನು.ರೂ. - ಕತ್ತೆ ಅಂತಿ (ಸಿ ೨)

ತಿ.ರೂ. - ನಾನು ಗೌರಿಯನ್ನು ಕತ್ತೆ ಅನ್ನುತ್ತೇನೆ

(ನಾನು) (ಗೌರಿಯನ್ನು ಕತ್ತೆ ಅನ್ನುತ್ತೇನೆ)

ನಾನು - ನಾ.ಗು.

ಗೌರಿಯನ್ನು ಕತ್ತೆ ಅನ್ನುತ್ತೇನೆ - ಕ್ರಿ.ಗು.

(ಸಂದರ್ಭ: ಗೌರಿಯನ್ನು ಕತ್ತೆ ಅನ್ನಬೇಡ ಎಂದು ಹೇಳಿದಾಗ ಮಗು ನಾನು ಗೌರಿಯನ್ನು ಕತ್ತೆ ಅನ್ನುತ್ತೇನೆ ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಕತ್ತೆ' ಎನ್ನುವ ನಾಮಪದವನ್ನು 'ಅಂತಿ' ಎನ್ನುವ ಕ್ರಿಯಾಪದ ರೂಪವನ್ನು ನುಡಿದಿದೆ.

• ನು.ರೂ. - ಗಾತಿ ಕೊತ್ತಿ (ಸಿ ೨)

ತಿ.ರೂ. - ನಾನು ಚಾಕೋಲೇಟನ್ನು ಗಾಯತ್ರಿಗೆ ಕೊಡುತ್ತೇನೆ

(ನಾನು) (ಚಾಕೋಲೇಟನ್ನು ಗಾಯತ್ರಿಗೆ ಕೊಡುತ್ತೇನೆ)

ನಾನು - ನಾ.ಗು.

ಚಾಕೋಲೇಟನ್ನು ಗಾಯತ್ರಿಗೆ ಕೊಡುತ್ತೇನೆ - ಕ್ರಿ.ಗು.

(ಸಂದರ್ಭ: ಚಾಕೋಲೇಟನ್ನು ಯಾರಿಗೆ ಕೊಡುತ್ತೀಯಾ; ಎಂದು ಕೇಳಿದಾಗ ಮಗು ಗಾಯತ್ರಿಗೆ ಕೊಡುತ್ತೇನೆ ಎಂದು ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛದಲ್ಲಿನ 'ಗಾಯತ್ರಿ' ಎನ್ನುವ ನಾಮಪದವನ್ನು 'ಕೊತ್ತಿ' ಎನ್ನುವ ಕ್ರಿಯಾರೂಪವನ್ನು ಅಭಿವ್ಯಕ್ತಿಗೊಳಿಸಿದೆ.

• ನು.ರೂ. - ನಾನು ಬತ್ತಿನಿ (ಸಿ ೨)

ತಿ.ರೂ. - ನಾನು ಮಾರ್ಕೆಟಿಗೆ ಬರುತ್ತೇನೆ

(ನಾನು) (ಮಾರ್ಕೆಟಿಗೆ ಬರುತ್ತೇನೆ)

ನಾನು - ನಾ.ಗು.

ಮಾರ್ಕೆಟಿಗೆ ಬರುತ್ತೇನೆ - ಕ್ರಿ.ಗು.

(ಸಂದರ್ಭ: ಮಗು ನಾನು ಮಾರ್ಕೆಟಿಗೆ ಬರುತ್ತೇನೆ ಎಂದು ಅಜ್ಜಿಯನ್ನು ಕೇಳುತ್ತದೆ.) ಮಗು ನಾಮಪದ ಗುಚ್ಛಕ್ಕೆ ಸೇರಿದ 'ನಾನು' ಎನ್ನುವ ಉತ್ತಮ ಪುರುಷ ಸರ್ವನಾಮವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಬರುತ್ತೇನೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ. 'ಬರುತ್ತೇನೆ' ಎನ್ನುವಲ್ಲಿ ವರ್ತಮಾನ ಕಾಲಸೂಚಕ ಪ್ರತ್ಯಯ ಮತ್ತು 'ಏನೆ' ಎನ್ನುವಲ್ಲಿ ಉತ್ತಮ ಪುರುಷ ಸರ್ವನಾಮವನ್ನು ಸೂಚಿಸುತ್ತದೆ. ಮಗು ಬರುತ್ತೇನೆ ಎನ್ನುವ ಪ್ರಮಾಣೀತ ಭಾಷೆಯ ರೂಪಕ್ಕೆ ಬದಲಾಗಿ ತನ್ನ ಪ್ರಾದೇಶಿಕ ಆಡುಭಾಷೆಯ ರೂಪವಾದ 'ಬತ್ತಿನಿ' ಎನ್ನುವ ಪದವನ್ನು ನುಡಿದಿದೆ.

• ನು.ರೂ. - ನಾನು ಮಾತಿನಿ (ಸಿ ೫)

ತಿ.ರೂ. - ನಾನು ಹೂವನ್ನು ಮಾಡುತ್ತೇನೆ

(ನಾನು) (ಹೂವನ್ನು ಮಾಡುತ್ತೇನೆ)

ನಾನು - ನಾ.ಗು.

ಹೂವನ್ನು ಮಾಡುತ್ತೇನೆ - ಕ್ರಿ.ಗು.

(ಸಂದರ್ಭ: ಮಗು ಹಿಟ್ಟಿನಿಂದ ಹೂವನ್ನು ಮಾಡುತ್ತೇನೆ ಎಂದು ಹಿಟ್ಟನ್ನು ತೆಗೆದುಕೊಂಡು ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ 'ನಾನು' ಎನ್ನುವ ಉತ್ತಮ ಪುರುಷ ಸರ್ವನಾಮವನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಮಾಡುತ್ತೇನೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ. 'ಮಾತಿನಿ' ಎನ್ನುವ ಆಡುಭಾಷೆಯ ಕ್ರಿಯಾಪದ ರೂಪವನ್ನು ನುಡಿದಿದೆ.

- ನು.ರೂ. - ಶಶಾಂಕೋರ್ ಮನಿಗೆ ಒಂದು ಸಣ್ಣ ಪಾಪ ಬಂದತೆ (ಸಿ ೪)

  ತಿ.ರೂ. - ಒಂದು ಚಿಕ್ಕ ಪಾಪು ಶಶಾಂಕ್ ಅವರ ಮನೆಗೆ ಬಂದಿದೆ.

  **(ಒಂದು ಚಿಕ್ಕ ಪಾಪು) (ಶಶಾಂಕ್ ಅವರ ಮನೆಗೆ ಬಂದಿದೆ)**

  ಒಂದು ಚಿಕ್ಕ ಪಾಪು - ನಾ.ಗು.

  ಶಶಾಂಕ್ ಅವರ ಮನೆಗೆ ಬಂದಿದೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಗೆಳೆಯ ಶಶಾಂಕನ ಮನೆಗೆ ಬಂದ ಚಿಕ್ಕಪಾಪುವನ್ನು ನೋಡಿ ತನ್ನ ಅಮ್ಮನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ ಒಂದು ಸಣ್ಣ ಪಾಪು ಎನ್ನುವಲ್ಲಿ 'ಒಂದು' ಎನ್ನುವ ಸಂಖ್ಯಾವಾಚಕವನ್ನು 'ಸಣ್ಣ ಪಾಪು' ಎನ್ನುವ ವಿಶೇಷಣ ಮತ್ತು ವಿಶೇಷ್ಯವನ್ನು ನುಡಿದಿದೆ.

ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಶಶಾಂಕ್' ಎನ್ನುವ ನಾಮಪದವನ್ನು 'ಬಂದಿದೆ' ಎನ್ನುವ ಭೂತಕಾಲ ಸೂಚಕ ಕ್ರಿಯಾಪದವನ್ನು ನುಡಿದಿದೆ. 'ಬಂದಿದೆ' ಎನ್ನುವಲ್ಲಿ ( ಬರು+ದ+ಎ) ಭೂತಕಾಲ ಸೂಚಕ ಕ್ರಿಯಾಪದವನ್ನು ನುಡಿಯುವ ಮೂಲಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಇವತ್ತು ನಾವು ಬಜಾರಕ್ಕ ಓತಿವಿ (ಸಿ ೬)

  ತಿ.ರೂ. - ನಾವು ಈ ದಿನ ಬಜಾರ್‌ಗೆ ಹೋಗುತ್ತೇವೆ

  **(ನಾವು) (ಈ ದಿನ ಬಜಾರ್‌ಗೆ ಹೋಗುತ್ತೇವೆ)**

  ನಾವು - ನಾ.ಗು.

  ಈ ದಿನ ಬಜಾರ್‌ಗೆ ಹೋಗುತ್ತೇವೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಗೆಳೆಯನಿಗೆ ಹೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ ಉತ್ತಮ ಪುರುಷ ಬಹುವಚನವನ್ನು ಮತ್ತು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಹೋಗುತ್ತೇವೆ' ಎನ್ನುವ ಕ್ರಿಯಾಪದವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ನಾವು ಇಲ್ಲಿ ಕುಂತಗಂಡು ಆಟ ಆಡ್ತಿವಿ (ಡಿ ೨)

  ತಿ.ರೂ. - ನಾವು ಇಲ್ಲೇ ಕುಳಿತುಕೊಳ್ಳುತ್ತೇವೆ ಮತ್ತು ನಾವು ಆಟ ಆಡುತ್ತೇವೆ

  ೧. ನಾವು ಇಲ್ಲೇ ಕುಳಿತುಕೊಳ್ಳುತ್ತೇವೆ

  **(ನಾವು) (ಇಲ್ಲೇ ಕುಳಿತು ಕೊಳ್ಳುತ್ತೇವೆ)**

  ನಾವು - ನಾ.ಗು.

  ಇಲ್ಲೇ ಕುಳಿತುಕೊಳ್ಳುತ್ತೇವೆ - ಕ್ರಿ.ಗು.

  ೨. ನಾವು ಆಟ ಆಡುತ್ತೇವೆ

  **(ನಾವು) (ಆಟ ಆಡುತ್ತೇವೆ)**

  ನಾವು - ನಾ.ಗು.

  ಆಟ ಆಡುತ್ತೇವೆ - ಕ್ರಿ.ಗು.

(ಸಂದರ್ಭ:ಮಗುವಿನ ತಾಯಿ ಮಗುವನ್ನು ಮತ್ತು ಅದರ ಸ್ನೇಹಿತರನ್ನು ಪಾರ್ಕಿಗೆ ಹೋಗುತ್ತೀರಾ; ಎಂದು ಕೇಳಿದಾಗ ಮಗು ಮೇಲಿನ ಮಾತನ್ನು ತನ್ನ ಅಮ್ಮನಿಗೆ ಹೇಳುತ್ತದೆ.)

ಮೇಲಿನ ಅಭಿವ್ಯಕ್ತಿಯು ಎರಡು ಸರಳ ವಾಕ್ಯಗಳನ್ನು ಒಳಗೊಂಡ ಸಂಕೀರ್ಣ ವಾಕ್ಯವಾಗಿದೆ. 'ನಾವು ಇಲ್ಲೇ ಕುಳಿತುಕೊಳ್ಳುತ್ತೇವೆ.' ಮತ್ತು 'ಆಟ ಆಡುತ್ತೇವೆ'. 'ಇಲ್ಲೇ ಕುಂತಗಂಡು' ಎನ್ನುವಲ್ಲಿ ಮಗು ಅಪರಿಪೂರ್ಣ ಕ್ರಿಯಾಪದವನ್ನು ಬಳಸಿದೆ. ಸಂಕೀರ್ಣ ವಾಕ್ಯದಲ್ಲಿ ಒಂದು ಅಪರಿಪೂರ್ಣ ಕ್ರಿಯಾಪದವನ್ನು ಬಳಸಿಕೊಂಡು ವಾಕ್ಯವನ್ನು ಮಾಡುವುದು ಕನ್ನಡ ಭಾಷೆಯ ನಿಯಮ. ಇದನ್ನು ಮಗು ರೂಢಿಸಿಕೊಂಡಿದೆ. 'ಆಟ ಆಡ್ತಿವಿ' ಎನ್ನುವಲ್ಲಿ ಮಗು ಅಭೂತಕಾಲವನ್ನು ಸೂಚಿಸುವ ಕ್ರಿಯಾಪದವನ್ನು ನುಡಿದಿದೆ.

- ನು.ರೂ. - ಕತ್ರಿ ಕೊಡು ಕಟ್ ಮಾಡ್ತಿನಿ (ಡಿ ೨)
  ತಿ.ರೂ. - ನೀನು ನನಗೆ ಕತ್ತರಿ ಕೊಡು. ನಾನು ಪೇಪರ್ ಕಟ್ ಮಾಡುತ್ತೇನೆ

೧. ನೀನು ನನಗೆ ಕತ್ತರಿ ಕೊಡು

(ನೀನು) (**ನನಗೆ ಕತ್ತರಿ ಕೊಡು**)

ನೀನು - ನಾ.ಗು.

ನನಗೆ ಕತ್ತರಿ ಕೊಡು - ಕ್ರಿ.ಗು.

೨. ನಾನು ಪೇಪರ್ ಕಟ್ ಮಾಡುತ್ತೇನೆ

(ನಾನು) (**ಪೇಪರ್ ಕಟ್ ಮಾಡುತ್ತೇನೆ**)

ನಾನು - ನಾ.ಗು.

ಪೇಪರ್ ಕಟ್ ಮಾಡುತ್ತೇನೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಆಂಟಿಯನ್ನು ಕತ್ತರಿ ಕೊಡುವಂತೆ ಕೇಳುವಾಗ ಈ ಮೇಲಿನ ಮಾತನ್ನು ಆಡುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ಎರಡು ಸರಳ ವಾಕ್ಯಗಳಿವೆ. 'ನೀನು ನನಗೆ ಕತ್ತರಿ ಕೊಡು' ಎನ್ನುವಲ್ಲಿ ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಕತ್ತರಿ' ಎನ್ನುವ ನಾಮಪದವನ್ನು 'ಕೊಡು' ಎನ್ನುವ ಕ್ರಿಯಾಪದವನ್ನು ನುಡಿದಿದೆ. 'ನಾನು ಪೇಪರ್ ಕಟ್ ಮಾಡುತ್ತೇನೆ' ಎನ್ನುವಲ್ಲಿ ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಕಟ್' ಎನ್ನುವ ನಾಮಪದವನ್ನು ಮಾಡುತ್ತೇನೆ (ಮಾಡು+ ಉತ್+ ಏನೆ) ಎನ್ನುವ ಅಭೂತಕಾಲ ಸೂಚಕ ಕ್ರಿಯಾಪದವನ್ನು ನುಡಿದಿದೆ. ಈ ಮೂಲಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ. ('ಕಟ್' ಎನ್ನುವುದು ಇಂಗ್ಲಿಷ್‌ನ ಕ್ರಿಯಾಪದವಾದರೂ ಅದನ್ನು ಕನ್ನಡಕ್ಕೆ ಸ್ವೀಕರಿಸುವಾಗ ನಾಮಪದವಾಗಿ ಬಳಸಿಕೊಳ್ಳಲಾಗುತ್ತದೆ. ಇದನ್ನು ಮಗು ನಿಯಮಬದ್ಧವಾಗಿ ರೂಢಿಸಿಕೊಂಡಿದೆ.)

**ಸಾರಾಂಶ:**

- ಮಕ್ಕಳು ಕ್ರಿಯಾಧಾತುಗಳನ್ನು ಮೊದಲು ಉಚ್ಚರಿಸಿ ನಂತರ ಕಾಲಸೂಚಕ ಪ್ರತ್ಯಯಗಳನ್ನು, ಆಖ್ಯಾತ ಪ್ರತ್ಯಯಗಳನ್ನು ಉಚ್ಚರಿಸುವುದಿಲ್ಲ. ಅಂದರೆ ಧಾತುಗಳಾದ 'ಬೀಳು, ಬರು, ನೋಡು, ಮಾಡು' ಮುಂತಾದ ಯಾವುದೇ ಧಾತುಗಳನ್ನಾಗಲಿ ಮತ್ತು 'ದ', 'ಉತ್', 'ಉವ' ಎನ್ನುವ ಭೂತ ಮತ್ತು ಅಭೂತ ಕಾಲಸೂಚಕ ಪ್ರತ್ಯಯಗಳನ್ನಾಗಲಿ ಹಾಗೂ ಆಖ್ಯಾತ ಪ್ರತ್ಯಯಗಳನ್ನಾಗಲಿ ಸ್ವತಂತ್ರವಾಗಿ ಬಿಡಿಬಿಡಿಯಾಗಿ ನುಡಿಯದೆ, ಕ್ರಿಯಾಪದಗಳನ್ನು ನುಡಿಯುವಾಗಲೇ ಪೂರ್ಣ ರೂಪದಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ.
- ಸುಮಾರು ಒಂದೂವರೆಯಿಂದ ಎರಡು ವರ್ಷದವರೆಗಿನ ಮಕ್ಕಳ ಕಾಲಸೂಚಕ ಕ್ರಿಯಾಪದಗಳಲ್ಲಿ ಧಾತು ಕಾಲಸೂಚಕ ಪ್ರತ್ಯಯ ಮತ್ತು ಅಖ್ಯಾತ ಪ್ರತ್ಯಯಗಳನ್ನು ಬಿಡಿಸಿ ತೋರಿಸುವಷ್ಟು ಸ್ಪಷ್ಟವಾದ ಉಚ್ಚಾರಣೆಯನ್ನು ಕಾಣದಿದ್ದರೂ  ಕ್ರಿಯಾಪದಗಳು ಆ ಮೂರನ್ನೂ ಒಳಗೊಂಡ ಪೂರ್ಣ ಕ್ರಿಯಾಪದಗಳನ್ನು ಹೋಲುವ ಪದಗಳಾಗಿರುತ್ತವೆ. ಎರಡು ವರ್ಷದ ನಂತರದ ಮಕ್ಕಳು ಅವುಗಳನ್ನು ಸ್ಪಷ್ಟವಾದ ಉಚ್ಚಾರಣೆಯಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ.
- ಕಾಲಸೂಚಕ ಕ್ರಿಯಾಪದಗಳನ್ನು ಅಭಿವ್ಯಕ್ತಿಗೊಳಿಸುವಲ್ಲಿ ಕೆಲವು ವೇಳೆ ಮಕ್ಕಳಿಂದ ಮಕ್ಕಳಿಗೆ ವಯೋಮಾನದ ಅಂತರವನ್ನು ಕಾಣಬಹುದಾದರೂ ಸಾಮಾನ್ಯವಾಗಿ ಒಂದು ವರ್ಷ ಹತ್ತು ತಿಂಗಳಿನಿಂದ ಎರಡು ವರ್ಷ ನಾಲ್ಕು ತಿಂಗಳ ಅಂತರದಲ್ಲಿ ಅವುಗಳನ್ನು ಗ್ರಹಿಕೆಯ ಮೂಲಕ ಅಭಿವ್ಯಕ್ತಿಗೊಳಿಸುವುದನ್ನು ಕಾಣಬಹುದು. ಆದರೆ ಯಾವುದೇ ಹಂತದಲ್ಲಿ ಅಭಿವ್ಯಕ್ತಿಗೊಳಿಸಿದರೂ ಧಾತು, ಕಾಲಸೂಚಕ ಮತ್ತು ಅಖ್ಯಾತ ಪ್ರತ್ಯಯಗಳನ್ನು ಸ್ವತಂತ್ರವಾಗಿ ಬಿಡಿಬಿಡಿಯಾಗಿ ಪಡೆದು ನುಡಿಯುವುದಿಲ್ಲ. ಪಡೆದುಕೊಳ್ಳುವಾಗಲೇ ಪೂರ್ಣ ರೂಪದಲ್ಲಿ ಪಡೆದುಕೊಂಡು ಅಭಿವ್ಯಕ್ತಿಗೊಳಿಸುತ್ತಾರೆ.
- ಅಪರಿಪೂರ್ಣ ಕ್ರಿಯಾಪದವನ್ನು ಬಳಸಿಕೊಂಡು ಸಂಕೀರ್ಣ ವಾಕ್ಯವನ್ನು ಮಾಡುವುದು ಕನ್ನಡ ಭಾಷೆಯ ನಿಯಮ. ಎರಡೂವರೆ ವರ್ಷ ವಯೋಮಾನದ ಮಕ್ಕಳಲ್ಲಿ ಇದನ್ನು ಕಾಣಬಹುದು.

# ನಿಷೇಧಾತ್ಮಕ ವಾಕ್ಯಗಳು

ಮಕ್ಕಳಲ್ಲಿ ನಿಷೇಧಾತ್ಮಕ ವಾಕ್ಯಗಳು ಅಂತಸ್ಥ ರೂಪಕ್ಕೆ ಅನುಗುಣವಾಗಿ ಬಳಕೆ ರೂಪವು ನಿಯಮಬದ್ಧವಾಗಿರುತ್ತದೆಯೇ ಎನ್ನುವುದನ್ನು ಕೆಲವು ನಿದರ್ಶನಗಳ ಮೂಲಕ ತಿಳಿಯಬಹುದು. ಅಲ್ಲದೆ, ಅವು ಮಕ್ಕಳಲ್ಲಿ ಉಚ್ಚಾರಣೆ ಮೂಲಕ ಅಭಿವ್ಯಕ್ತಿಗೊಳಿಸುವ ವಯೋಮಾನವನ್ನು ತಿಳಿಯಬಹುದಾಗಿದೆ. ಈ ಮುಂದಿನ ನಿದರ್ಶನಗಳಲ್ಲಿ ಈ ಮೇಲಿನ ಸಂಗತಿಯನ್ನು ತಿಳಿಯಬಹುದು.

- ನು.ರೂ. - ಅಪ್ಪಲ್ಲ ಅಜ್ಜಿ (ಬಿ ಳ)
  ತಿ.ರೂ. - ಬಂದವರು ಅಪ್ಪ ಅಲ್ಲ ಅಜ್ಜಿ ಆಗಿದ್ದಾರೆ

೧. ಬಂದವರು ಅಪ್ಪ ಅಲ್ಲ
(ಬಂದವರು ) (ಅಪ್ಪ ಅಲ್ಲ)

ಬಂದವರು - ನಾ.ಗು.
ಅಪ್ಪ ಅಲ್ಲ - ಕ್ರಿ.ಗು.

೨. ಅವರು ಅಜ್ಜಿ ಆಗಿದ್ದಾರೆ
(ಅವರು) (ಅಜ್ಜಿ ಆಗಿದ್ದಾರೆ)

ಅವರು - ನಾ.ಗು.
ಅಜ್ಜಿ ಆಗಿದ್ದಾರೆ - ಕ್ರಿ.ಗು.

(ಸಂದರ್ಭ: ಮಗುವಿನ ತಾಯಿ ಗೇಟ್ ಸೌಂಡ್ ಆದದ್ದನ್ನು ಕೇಳಿ ಅಪ್ಪ ಬಂದರಾ ಎಂದು ಕೇಳಿದಾಗ ಮಗು ಮೇಲಿನ ರೀತಿ ಹೇಳುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ಎರಡು ಸರಳ ವಾಕ್ಯಗಳಿವೆ. 'ಬಂದವರು ಅಪ್ಪ ಅಲ್ಲ' ಎಂಬ ವಾಕ್ಯದಲ್ಲಿ ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಅಪ್ಪ' ಎನ್ನುವ ನಾಮಪದವನ್ನು 'ಅಲ್ಲ' ಎನ್ನುವ ನಿಷೇಧ ರೂಪವನ್ನು ನುಡಿದಿದೆ ಮತ್ತು ' ಅವರು ಅಜ್ಜಿ ಆಗಿದ್ದಾರೆ' ಎಂಬ ವಾಕ್ಯದಲ್ಲಿ ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಅಜ್ಜಿ' ಎಂಬ ನಾಮಪದವನ್ನು ನುಡಿದಿದೆ. ಈ ಮೂಲಕ ನಿಷೇಧ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಅಪ್ಪಿಲ್ಲ ಆಪೀಚು (ಬಿ ಳ)
  ತಿ.ರೂ. - ಅಪ್ಪ ಮನೆಯಲ್ಲಿ ಇಲ್ಲ. ಆಫೀಸಿಗೆ ಹೋಗಿದ್ದಾರೆ

೧. ಅಪ್ಪ ಮನೆಯಲ್ಲಿ ಇಲ್ಲ
(ಅಪ್ಪ) (ಮನೆಯಲ್ಲಿ ಇಲ್ಲ)

ಅಪ್ಪ - ನಾ.ಗು.
ಮನೆಯಲ್ಲಿ ಇಲ್ಲ - ಕ್ರಿ.ಗು.

೨. ಅವರು ಆಫೀಸಿಗೆ ಹೋಗಿದ್ದಾರೆ
(ಅವರು) (ಆಫೀಸಿಗೆ ಹೋಗಿದ್ದಾರೆ)

ಅವರು - ನಾ.ಗು.
ಆಫೀಸಿಗೆ ಹೋಗಿದ್ದಾರೆ - ಕ್ರಿ.ಗು.

(ಸಂದರ್ಭ: ಅಪ್ಪ, ಇರುವರೆ ಎಂದು ಮಗುವಿನ ಆಂಟಿ ಅದನ್ನು ಕೇಳಿದಾಗ ಮಗು ಮೇಲಿನ ರೀತಿ ಹೇಳುತ್ತದೆ.)
ಮೇಲಿನ ಅಭಿವ್ಯಕ್ತಿಯಲ್ಲಿ ಎರಡು ಸರಳ ವಾಕ್ಯಗಳನ್ನು ಕಾಣಬಹುದು.

- ನು.ರೂ. - ಅಮ್ಮ ಎನ್ನಿ ಇಲ್ಲ (ಬಿ ೨)
  ತಿ.ರೂ. - ನಿನ್ನ ತಲೆಗೆ ಎಣ್ಣೆ ಇಲ್ಲ
  (ನಿನ್ನ ತಲೆಗೆ) (ಎಣ್ಣೆ ಇಲ್ಲ)
  ನಿನ್ನ ತಲೆಗೆ - ನಾ.ಗು.
  ಎಣ್ಣೆ ಇಲ್ಲ - ಕ್ರಿ.ಗು.

(ಸಂದರ್ಭ: ತನ್ನ ಅಮ್ಮನ ಕೂದಲು ಹಾರುತ್ತಿರುವುದನ್ನು ನೋಡಿ ಮಗು ಮೇಲಿನ ರೀತಿ ಹೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಎಣ್ಣೆ' ಎನ್ನುವ ನಾಮಪದವನ್ನು 'ಇಲ್ಲ' ಎನ್ನುವ ನಿಷೇಧ ರೂಪವನ್ನು ನುಡಿದಿದೆ. ಈ ಮೂಲಕ ನಿಷೇಧ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಚಾಕಿ ಚೆನ್ನಿಲ್ಲ (ಬಿ ೧)
  ತಿ.ರೂ. - ಚಾಕಲೇಟ್ ಚೆನ್ನಾಗಿಲ್ಲ
  (**ಚಾಕಲೇಟ್**) (**ಚೆನ್ನಾಗಿಲ್ಲ**)
  ಚಾಕಲೇಟ್ - ನಾ.ಗು.
  ಚೆನ್ನಾಗಿಲ್ಲ - ಕ್ರಿ.ಗು.

(ಸಂದರ್ಭ: ಕೊಟ್ಟಂತಹ ಚಾಕಲೇಟನ್ನು ತಿಂದು ಮಗು ಚೆನ್ನಾಗಿಲ್ಲ ಎಂದು ಮೇಲಿನ ರೀತಿ ಹೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಚಾಕಿ' ಎನ್ನುವ ನಾಮಪದವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಚೆನ್ನಿಲ್ಲ' ಎನ್ನುವ ನಿಷೇಧ ರೂಪವನ್ನು ನುಡಿದಿದೆ.

- ನು.ರೂ. - ತುಟ್ಟ ನೀರು ಬೇಡ (ಬಿ ೪)
  ತಿ.ರೂ. - ನನಗೆ ಬಿಸಿ ನೀರು ಬೇಡ
  (ನನಗೆ) (**ಬಿಸಿ ನೀರು ಬೇಡ**)
  ನನಗೆ - ನಾ.ಗು.
  ಬಿಸಿ ನೀರು ಬೇಡ - ಕ್ರಿ.ಗು.

(ಸಂದರ್ಭ: ಮಗು ಸ್ನಾನಕ್ಕೆ ಬಿಸಿನೀರು ಬೇಡ ಎಂದು ತನ್ನ ಅಮ್ಮನಿಗೆ ಹೇಳುತ್ತದೆ. (ತುಟ್ಟ-ಸುಡುವ) )

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ ವಿಶೇಷಣ ಮತ್ತು ವಿಶೇಷ್ಯವನ್ನು, 'ಬೇಡ' ಎನ್ನುವ ನಿಷೇಧ ರೂಪವನ್ನು ನುಡಿದಿದೆ. ಈ ಮೂಲಕ ನಿಷೇಧ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಅಂಗಲ್ಲ ಇಂಗೆ ತೋಚಿನಿ (ಸಿ ೨)
  ತಿ.ರೂ. - ಸೈಕಲ್ ನಿಲ್ಲಿಸುವುದು ಹಾಗಲ್ಲ. ಅದನ್ನು ಹೀಗೆ ನಿಲ್ಲಿಸಬೇಕು. ನಾನು ತೋರಿಸುತ್ತೇನೆ

  ೧. ಸೈಕಲ್ ನಿಲ್ಲಿಸುವುದು ಹಾಗಲ್ಲ.
  (ಸೈಕಲ್ ನಿಲ್ಲಿಸುವುದು) (**ಹಾಗಲ್ಲ**)
  ಸೈಕಲ್ ನಿಲ್ಲಿಸುವುದು - ನಾ.ಗು.
  ಹಾಗಲ್ಲ - ಕ್ರಿ.ಗು.

  ೨. ಅದನ್ನು ಹೀಗೆ ನಿಲ್ಲಿಸಬೇಕು
  (ಅದನ್ನು) (**ಹೀಗೆ ನಿಲ್ಲಿಸಬೇಕು**)
  ಅದನ್ನು - ನಾ.ಗು.
  ಹೀಗೆ ನಿಲ್ಲಿಸಬೇಕು - ಕ್ರಿ.ಗು.

೩. ನಾನು ತೋರಿಸುತ್ತೇನೆ
(ನಾನು) (ತೋರಿಸುತ್ತೇನೆ)

ನಾನು - ನಾ.ಗು.
ತೋರಿಸುತ್ತೇನೆ - ಕ್ರಿ.ಗು.

(ಸಂದರ್ಭ: ಸೈಕಲ್ ನಿಲ್ಲಿಸುವಾಗ ತನ್ನ ಆಂಟಿಗೆ ಮಗು ಮೇಲಿನ ಮಾತನ್ನು ಹೇಳುತ್ತದೆ. )

ಮೇಲಿನ ಅಭಿವ್ಯಕ್ತಿಯು ಮೂರು ಸರಳ ವಾಕ್ಯಗಳನ್ನು ಒಳಗೊಂಡಿದೆ. 'ಸೈಕಲ್ ನಿಲ್ಲಿಸುವುದು ಹಾಗಲ್ಲ' ಎಂಬ ವಾಕ್ಯದಲ್ಲಿ ಮಗು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಹಾಗಲ್ಲ' ಎಂಬ ನಿಷೇಧ ರೂಪವನ್ನು ನುಡಿದಿದೆ. ' ಅದನ್ನು ಹೀಗೆ ನಿಲ್ಲಿಸಬೇಕು" ಎನ್ನುವಲ್ಲಿ 'ಹೀಗೆ' ಎಂಬ ಕ್ರಿಯಾ ವಿಶೇಷಣವನ್ನು ನುಡಿದಿದೆ. 'ನಾನು ತೋರಿಸುತ್ತೇನೆ' ಎನ್ನುವಲ್ಲಿ 'ತೋರಿಸುತ್ತೇನೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ.

- ನು.ರೂ. - ನಾನು ಒಳ್ಳೇನಲ್ಲ ನೋಡು ನನ್ನ ತಂಟಿಗ್ ಬಬಾಡ (ಡಿ ೪)
  ತಿ.ರೂ. - ನಾನು ಒಳ್ಳೆಯವನಲ್ಲ. ನನ್ನ ತಂಟೆಗೆ ಬರಬೇಡ

೧. ನಾನು ಒಳ್ಳೆಯವನಲ್ಲ
(ನಾನು) (ಒಳ್ಳೆಯವನಲ್ಲ)

ನಾನು - ನಾ.ಗು.
ಒಳ್ಳೆಯವನಲ್ಲ - ಕ್ರಿ.ಗು.

೨. ನನ್ನ ತಂಟೆಗೆ ಬರಬೇಡ
(ನನ್ನ ತಂಟೆಗೆ) (ಬರಬೇಡ)

ನನ್ನ ತಂಟೆಗೆ - ನಾ.ಗು.
ಬರಬೇಡ - ಕ್ರಿ.ಗು.

(ಸಂದರ್ಭ: ಮಗು ಆಟವಾಡುವಾಗ ತನಗೆ ಹೊಡೆದ ಹುಡುಗನಿಗೆ ಮೇಲಿನ ಮಾತನ್ನು ಹೇಳುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ಎರಡು ಸರಳ ವಾಕ್ಯಗಳಿವೆ. ಮಗು 'ನಾನು ಒಳ್ಳೆಯವನಲ್ಲ' ಮತ್ತು 'ನನ್ನ ತಂಟೆಗೆ ಬರಬೇಡ' ಎಂಬ ಎರಡು ನಿಷೇಧ ವಾಕ್ಯಗಳನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಶಶಾಂಕ್ ದಡ್ಡ ಹೋಮ್ ವರ್ಕ್ ಮಾಡಲ್ಲ (ಸಿ ೪)
  ತಿ.ರೂ. - ಶಶಾಂಕ್ ದಡ್ಡ ಆಗಿದ್ದಾನೆ. ಅವನು ಹೋಮ್ ವರ್ಕ್ ಮಾಡಲ್ಲ

೧. ಶಶಾಂಕ್ ದಡ್ಡ ಆಗಿದ್ದಾನೆ
(ಶಶಾಂಕ್) (ದಡ್ಡ ಆಗಿದ್ದಾನೆ)

ಶಶಾಂಕ್ - ನಾ.ಗು.
ದಡ್ಡ ಆಗಿದ್ದಾನೆ - ಕ್ರಿ.ಗು.

೨. ಅವನು ಹೋಮ್ ವರ್ಕ್ ಮಾಡಲ್ಲ
(ಅವನು) (ಹೋಮ್ ವರ್ಕ್ ಮಾಡಲ್ಲ)

ಅವನು - ನಾ.ಗು.
ಹೋಮ್ ವರ್ಕ್ ಮಾಡಲ್ಲ - ಕ್ರಿ.ಗು.

(ಸಂದರ್ಭ: ಮಗು ತನ್ನ ಗೆಳೆಯನ ಬಗ್ಗೆ ತನ್ನ ಅಮ್ಮನ ಬಳಿ ಹೇಳುತ್ತದೆ. )

ಮೇಲಿನ ಉಚ್ಚಾರಣೆಯು ಎರಡು ಸರಳ ವಾಕ್ಯಗಳನ್ನು ಒಳಗೊಂಡಿದೆ. 'ಶಶಾಂಕ್ ದಡ್ಡ' ಎನ್ನುವ ವಾಕ್ಯದಲ್ಲಿ ಮಗು ನಾಮಪದ ಗುಚ್ಚಕ್ಕೆ ಸೇರಿದ 'ಶಶಾಂಕ' ಎನ್ನುವ ನಾಮಪದವನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ದಡ್ಡ' ಎನ್ನುವ ನಾಮಪದವನ್ನು ನುಡಿದಿದೆ. 'ಅವನು ಹೋಮ್ ವರ್ಕ್ ಮಾಡಲ್ಲ' ಎನ್ನುವ ವಾಕ್ಯದಲ್ಲಿ, ಕ್ರಿಯಾಪದ ಗುಚ್ಚಕ್ಕೆ

ಸೇರಿದ 'ಹೋಮ್ ವರ್ಕ್' ಎನ್ನುವ ನಾಮಪದವನ್ನು 'ಮಾಡಲ್ಲ' ಎನ್ನುವ ನಿಷೇಧ ರೂಪವನ್ನು ನುಡಿಯುವ ಮೂಲಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ನಿನಿಗೆ ತಲೆ ಬಾಸಕ ಬರದಿಲ್ಲ ಅಪ್ಪಾದ್ರೆ ಬೇಸ್ ಬಾಸ್ತನ (ಡಿ ೫)

  ತಿ.ರೂ. - ನಿನಗೆ ತಲೆ ಬಾಚಲು ಬರುವುದಿಲ್ಲ. ಅಪ್ಪ ಚೆನ್ನಾಗಿ ಬಾಚುತ್ತಾನೆ

  ೧. ನಿನಗೆ ತಲೆ ಬಾಚಲು ಬರುವುದಿಲ್ಲ

  (ನಿನಗೆ) (ತಲೆ ಬಾಚಲು ಬರುವುದಿಲ್ಲ)

  ನಿನಗೆ - ನಾ.ಗು.

  ತಲೆ ಬಾಚಲು ಬರುವುದಿಲ್ಲ - ಕ್ರಿ.ಗು.

  ೨. ಅಪ್ಪ ತಲೆಯನ್ನು ಚೆನ್ನಾಗಿ ಬಾಚುತ್ತಾನೆ

  (ಅಪ್ಪ) (ತಲೆಯನ್ನು (ಚೆನ್ನಾಗಿ ಬಾಚುತ್ತಾನೆ))

  ಅಪ್ಪ - ನಾ.ಗು.

  ತಲೆಯನ್ನು ಚೆನ್ನಾಗಿ ಬಾಚುತ್ತಾನೆ - ಕ್ರಿ.ಗು.

  ಚೆನ್ನಾಗಿ ಬಾಚುತ್ತಾನೆ - ಕ್ರಿ.ಗು.

  ಚೆನ್ನಾಗಿ - ವಿ



(ಸಂದರ್ಭ: ಮಗು ತನ್ನ ಅಮ್ಮನಿಗೆ ಹೇಳುತ್ತದೆ.)

ಮೇಲಿನ ಉಚ್ಚಾರಣೆಯು ಎರಡು ಸರಳ ವಾಕ್ಯಗಳನ್ನು ಒಳಗೊಂಡಿದೆ. 'ನಿನಗೆ ತಲೆ ಬಾಚಲು ಬರುವುದಿಲ್ಲ' ಎನ್ನುವ ವಾಕ್ಯದಲ್ಲಿ ಮಗು ನಾಮಪದ ಗುಚ್ಛಕ್ಕೆ ಸೇರಿದ 'ನಿನಗೆ' ಎಂಬ ಮಧ್ಯಮ ಪುರುಷ ಸರ್ವನಾಮವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ತಲೆ ಬಾಚಲು ಬರುವುದು' ಎಂಬ ಕ್ರಿಯಾ ಗುಚ್ಛವನ್ನು ಮತ್ತು 'ಇಲ್ಲ' ಎನ್ನುವ ನಿಷೇಧ ರೂಪವನ್ನು ನುಡಿದಿದೆ. ಮತ್ತು 'ಅಪ್ಪ ಚೆನ್ನಾಗಿ ಬಾಚುತ್ತಾನೆ' ಎನ್ನುವಲ್ಲಿ ನಾಮಪದ ಗುಚ್ಛಕ್ಕೆ ಸೇರಿದ 'ಅಪ್ಪ' ಎನ್ನುವ ನಾಮಪದವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಚೆನ್ನಾಗಿ' ಎನ್ನುವ ಕ್ರಿಯಾ ವಿಶೇಷಣವನ್ನು ಮತ್ತು 'ಬಾಚುತ್ತಾನೆ' ಎನ್ನುವ ಕ್ರಿಯಾಪದವನ್ನು ನುಡಿದಿದೆ.

- ನು.ರೂ. - ಓಡಬೇಡ್ರಿ ನಾನು ಓಡಿ ಬಿದ್ದಿನಿ ಮೊಣಕಾಲು ಗಾಯ ಆಗ್ಯತೆ (ಸಿ ೩)

  ತಿ.ರೂ. - ನೀವು ಓಡಬೇಡಿ ನಾನು ಓಡಿದ್ದೇನೆ ನಾನು ಬಿದ್ದಿದ್ದೇನೆ ನನ್ನ ಮೊಣಕಾಲು ಗಾಯ ಆಗಿದೆ

  ೧. ನೀವು ಓಡಬೇಡಿ

  (ನೀವು) (ಓಡಬೇಡಿ)

  ನೀವು - ನಾ.ಗು.

  ಓಡಬೇಡಿ - ಕ್ರಿ.ಗು.

  ೨. ನಾನು ಓಡಿದ್ದೇನೆ

  (ನಾನು) (ಓಡಿದ್ದೇನೆ)

  ನಾನು - ನಾ.ಗು.

  ಓಡಿದ್ದೇನೆ - ಕ್ರಿ.ಗು.

೩. ನಾನು ಬಿದ್ದಿದ್ದೇನೆ
(ನಾನು) (ಬಿದ್ದಿದ್ದೇನೆ)

ನಾನು - ನಾ.ಗು.
ಬಿದ್ದಿದ್ದೇನೆ - ಕ್ರಿ.ಗು.

೪. ನನ್ನ ಮೊಣಕಾಲು ಗಾಯ ಆಗಿದೆ
(ನನ್ನ ಮೊಣಕಾಲು) (ಗಾಯ ಆಗಿದೆ)

ನನ್ನ ಮೊಣಕಾಲು - ನಾ.ಗು.
ಗಾಯ ಆಗಿದೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಸ್ನೇಹಿತರಿಗೆ ಹೇಳುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ನಾಲ್ಕು ಸರಳ ವಾಕ್ಯಗಳು ಒಟ್ಟಾಗಿ ಸೇರಿರುವುದನ್ನು ಕಾಣಬಹುದು.

- ನು.ರೂ. - ಅದನ್ ತೆಗೆದುಬಿಡು ಅದನ್ನ ನೋಡಕಾಗಲ್ಲ (ಡಿ ೩)
  ಶಿ.ರೂ. - ಅದನ್ನು ತೆಗೆದುಬಿಡು. ಅದನ್ನು ನೋಡಕಾಗಲ್ಲ

೧. ಅದನ್ನು ತೆಗೆದುಬಿಡು
(ಅದನ್ನು) (ತೆಗೆದುಬಿಡು)

ಅದನ್ನು - ನಾ.ಗು.
ತೆಗೆದುಬಿಡು - ಕ್ರಿ.ಗು.

೨. ಅದನ್ನು ನೋಡಕಾಗಲ್ಲ
(ಅದನ್ನು) (ನೋಡಕಾಗಲ್ಲ)

ಅದನ್ನು - ನಾ.ಗು.
ನೋಡಕಾಗಲ್ಲ - ಕ್ರಿ.ಗು.

(ಸಂದರ್ಭ: ಮಗು ಟಿ.ವಿ. ನೋಡುವಾಗ ಭಯಂಕರವಾದ ಚಿತ್ರವನ್ನು ನೋಡಿ ಹೇಳುತ್ತದೆ.)

ಮೇಲಿನ ಉಚ್ಚಾರಣೆಯಲ್ಲಿ ಎರಡು ಸರಳ ವಾಕ್ಯಗಳಿವೆ. 'ಅದನ್ನು ತೆಗೆದುಬಿಡು' ಎನ್ನುವ ವಾಕ್ಯದಲ್ಲಿ ನಾಮಪದ ಗುಚ್ಛಕ್ಕೆ ಸೇರಿದ 'ಅದನ್ನು' ಎನ್ನುವ ಪ್ರಥಮ ಪುರುಷ ಸರ್ವನಾಮವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ತೆಗೆದುಬಿಡು' ಎನ್ನುವ ನಿಷೇಧ ರೂಪವನ್ನು ನುಡಿದಿದೆ. 'ಅದನ್ನು ನೋಡುವುದಕ್ಕೆ ಆಗುವುದಿಲ್ಲ' ಎನ್ನುವಲ್ಲಿ ನಾಮಪದ ಗುಚ್ಛಕ್ಕೆ ಸೇರಿದ 'ಅದನ್ನು' ಎನ್ನುವ ಸರ್ವನಾಮವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ನೋಡುವುದಕ್ಕೆ ಆಗುವುದು' ಎನ್ನುವ ಕ್ರಿಯಾಪದವನ್ನು 'ಇಲ್ಲ' ಎನ್ನುವ ನಿಷೇಧ ರೂಪವನ್ನು ನುಡಿಯುವ ಮೂಲಕ ಎರಡು ನಿಷೇಧ ವಾಕ್ಯಗಳನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಅಂಗಲ್ಲಕ ಉಳಿನ ಇಂಗ ಇಡಕಂಡು ಬಡಿಬೇಕಮ್ಮ ನಿನಗೆ ನಿಮ್ಮಪ್ಪ ಏಳಿಕೊಟ್ಟಿಲ್ಲ (ಜಿ ೧)
  ಶಿ.ರೂ. - ಉಳಿಯನ್ನು ಹಿಡಿಯುವುದು ಹಾಗಲ್ಲ. ಅದನ್ನು ಹೀಗೆ ಹಿಡಿಯಬೇಕು. ಹೀಗೆ ಹೊಡೆಯಬೇಕು. ನಿನಗೆ ನಿಮ್ಮ ಅಪ್ಪ ಹೇಳಿಕೊಟ್ಟಿಲ್ಲವೇ

೧. ಉಳಿಯನ್ನು ಹಿಡಿಯುವುದು ಹಾಗಲ್ಲ
(ಉಳಿಯನ್ನು ಹಿಡಿಯುವುದು) (ಹಾಗಲ್ಲ)

ಉಳಿಯನ್ನು ಹಿಡಿಯುವುದು - ನಾ.ಗು.
ಹಾಗಲ್ಲ - ಕ್ರಿ.ಗು.

೨. ಅದನ್ನು ಹೀಗೆ ಹಿಡಿಯಬೇಕು

(ಅದನ್ನು) ( (ಹೀಗೆ) ಹಿಡಿಯಬೇಕು)

ಅದನ್ನು - ನಾ.ಗು.

ಹೀಗೆ ಹಿಡಿಯಬೇಕು - ಕ್ರಿ.ಗು.

೩. ಅದನ್ನು ಹೀಗೆ ಹೊಡೆಯಬೇಕು

(ಅದನ್ನು) (ಹೀಗೆ **ಹೊಡೆಯಬೇಕು**)

ಅದನ್ನು - ನಾ.ಗು.

ಹೀಗೆ ಹೊಡೆಯಬೇಕು - ಕ್ರಿ.ಗು.

೪. ನಿನಗೆ ನಿಮ್ಮ ಅಪ್ಪ ಹೇಳಿಕೊಟ್ಟಿಲ್ಲವೇ

(ನಿನಗೆ) (ನಿಮ್ಮ ಅಪ್ಪ ಹೇಳಿಕೊಟ್ಟಿಲ್ಲವೆ)

ನಿನಗೆ - ನಾ.ಗು.

ನಿಮ್ಮ ಅಪ್ಪ ಹೇಳಿಕೊಟ್ಟಿಲ್ಲವೆ - ಕ್ರಿ.ಗು.

(ಸಂದರ್ಭ: (ಉಳಿ -ಕುಸುರಿ ಕೆಲಸ ಮಾಡಲು ಬಳಸುವ ವಸ್ತು). ಉಳಿಯನ್ನು ನೇರವಾಗಿ ಹಿಡಿಯದೆ ಬಗ್ಗಿಸಿ ಹಿಡಿದಾಗ ಮಗು ಮೇಲಿನ ಮಾತನ್ನು ಮಾಹಿತಿ ಸಂಗ್ರಹಕಾರರಿಗೆ ಹೇಳುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ನಾಲ್ಕು ಸರಳ ವಾಕ್ಯಗಳನ್ನು ಕಾಣಬಹುದು. ಮೊದಲಿನ ವಾಕ್ಯವು ನಿಷೇಧ ವಾಕ್ಯವಾಗಿದೆ. ಎರಡನೆಯ ಮತ್ತು ಮೂರನೆಯ ವಾಕ್ಯಗಳು ಸಾಮಾನ್ಯ ವಾಕ್ಯವು, ನಾಲ್ಕನೆಯ ವಾಕ್ಯವು ಪ್ರಶ್ನಾರ್ಥಕ ವಾಕ್ಯವು ಆಗಿವೆ.

- ನು.ರೂ. - ಅವರು ಬಟ್ಟೇನೆ ಹಾಕ್ಕೊಂಡಿಲ್ಲ ಇದು ಬೇಡ ಬೇರೆ ಹಾಕು (೩ ೨)

ಶಿ.ರೂ. - ಅವರು ಬಟ್ಟೆಯನ್ನೇ ಹಾಕಿಕೊಂಡಿಲ್ಲ. ಇದು ನನಗೆ ಬೇಡ ನೀನು ಬೇರೆಯ ಬೇರೆಯ ಚಾನಲ್ ಹಾಕು

೧. ಅವರು ಬಟ್ಟೆಯನ್ನು ಹಾಕಿಕೊಂಡಿಲ್ಲ

**(ಅವರು) (ಬಟ್ಟೆಯನ್ನು ಹಾಕಿಕೊಂಡಿಲ್ಲ)**

ಅವರು - ನಾ.ಗು.

ಬಟ್ಟೆಯನ್ನು ಹಾಕಿಕೊಂಡಿಲ್ಲ - ಕ್ರಿ.ಗು.

೨. ಇದು ನನಗೆ ಬೇಡ

(**ಇದು**) (ನನಗೆ ಬೇಡ)

ಇದು - ನಾ.ಗು.

ನನಗೆ ಬೇಡ - ಕ್ರಿ.ಗು.

೩. ನೀನು ಬೇರೆಯ ಚಾನೆಲ್ ಹಾಕು

(ನೀನು) (**ಬೇರೆಯ ಚಾನೆಲ್ ಹಾಕು**)

ನೀನು - ನಾ.ಗು.

ಬೇರೆಯ ಚಾನೆಲ್ ಹಾಕು - ಕ್ರಿ.ಗು.

(ಸಂದರ್ಭ: ಟಿ.ವಿ.ಯಲ್ಲಿನ ಚಿತ್ರವನ್ನು ನೋಡಿ ಮಗು ತನ್ನ ಅಮ್ಮನಿಗೆ ಹೇಳುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ಮೂರು ಸರಳ ವಾಕ್ಯಗಳು ಒಟ್ಟಾಗಿ ಸೇರಿರುವುದನ್ನು ಕಾಣಬಹುದು.

**ಸಾರಾಂಶ:**

- ಮಕ್ಕಳು ಒಂದು ವರ್ಷ ಎಂಟು ತಿಂಗಳ ವಯೋಮಾನದ ವೇಳೆಗೆ 'ಇಲ್ಲ, ಅಲ್ಲ, ಬೇಡ' ಎನ್ನುವ ನಿಷೇಧ ರೂಪಗಳನ್ನು ಸಂದರ್ಭಾನುಸಾರವಾಗಿ ನುಡಿಯುವ ಮೂಲಕ ಅಭಿವ್ಯಕ್ತಿಗೊಳಿಸುತ್ತಾರೆ.
- ಸಾಮಾನ್ಯವಾಗಿ ಒಂದು ಪದದ ಹಂತದಲ್ಲೇ ನಿಷೇಧ ರೂಪಗಳನ್ನು ಕಾಣಬಹುದಾದರೂ ಎರಡು ಮತ್ತು ಎರಡಕ್ಕಿಂತ ಹೆಚ್ಚಿನ ಪದಗಳನ್ನು ನುಡಿಯುವ ಹಂತದಲ್ಲಿನ ನಿಷೇಧ ರೂಪಗಳ ಬಳಕೆಯು ರಚನಾ ಕೌಶಲ್ಯಗಳನ್ನು ಗುರುತಿಸುವಷ್ಟು ನಿರ್ದಿಷ್ಟವಾಗಿರುತ್ತವೆ.
- ಮಕ್ಕಳು ಇತರ ವಾಕ್ಯಗಳನ್ನು ಪಡೆದುಕೊಳ್ಳುವಾಗಲೇ ನಿಷೇಧ ರೂಪಗಳನ್ನು ಪಡೆದುಕೊಂಡಿರುತ್ತಾರೆ. ವಾಕ್ಯದಲ್ಲಿ ಅವುಗಳನ್ನು ಅಭಿವ್ಯಕ್ತಿಗೊಳಿಸುವಾಗಲೂ ನಿಯಮಬದ್ಧತೆಯನ್ನು ಅನುಸರಿಸುತ್ತಾರೆ.

ಅಧ್ಯಾಯ-೮

# ಪ್ರಶ್ನಾರ್ಥಕ ವಾಕ್ಯಗಳು

ಸಾಮಾನ್ಯವಾಗಿ ಮಕ್ಕಳಲ್ಲಿ ಏನು, ಎಲ್ಲಿ, ಯಾವುದು, ಯಾವಾಗ ಎನ್ನುವ ಪ್ರಶ್ನೆಗಳನ್ನು ಮಾಡುವ ಮನೋಭಾವಗಳು ಇರುವುದು ಸಹಜ. ಕೇಳಿ ತಿಳಿಯಬೇಕು ಎನ್ನುವ ಕುತೂಹಲ ಅವರಲ್ಲಿ ಇರುತ್ತದೆ. ಅಲ್ಲದೆ, ತಿಳಿದಿರುವುದನ್ನು ಹೆಚ್ಚು ಖಚಿತಪಡಿಸಿಕೊಳ್ಳಬೇಕು ಎನ್ನುವ ಮನೋಭಾವವೂ ಇರುತ್ತದೆ. ಈ ಪ್ರಶ್ನಾರ್ಥಕ ರೂಪಗಳು ಅಥವಾ ಪ್ರಶ್ನಾರ್ಥಕ ವಾಕ್ಯಗಳನ್ನು ಮಕ್ಕಳು ಅಭಿವ್ಯಕ್ತಿಗೊಳಿಸುವ ವಯೋಮಾನ ಯಾವುದು; ಮತ್ತು ಇತರೆ ವಾಕ್ಯಗಳು ಹಾಗೂ ಪ್ರಶ್ನಾರ್ಥಕ ವಾಕ್ಯಗಳನ್ನು ಅಭಿವ್ಯಕ್ತಿಗೊಳಿಸುವಲ್ಲಿ ವಯೋಮಾನದ ವ್ಯತ್ಯಾಸವೇನಾದರೂ ಇದೆಯೇ; ಮತ್ತು ಇತರೆ ವಾಕ್ಯಗಳನ್ನು ಪಡೆದುಕೊಳ್ಳುವ ಸಂದರ್ಭದಲ್ಲೇ ಪ್ರಶ್ನಾರ್ಥಕ ವಾಕ್ಯಗಳನ್ನು ಪಡೆದುಕೊಳ್ಳುತ್ತಾರೆಯೇ; ಹಾಗೂ ಅಂತಸ್ಥ ನಿಯಮಕ್ಕೆ ತಕ್ಕಂತೆ ಬಳಕೆಯ ರೂಪವು ನಿಯಮಬದ್ಧವಾಗಿರುತ್ತದೆಯೇ; ಎನ್ನುವ ಅಂಶಗಳನ್ನು ಈ ಅಧ್ಯಾಯದಲ್ಲಿ ಕೆಲವು ನಿದರ್ಶನಗಳ ಮೂಲಕ ತಿಳಿಯಬಹುದಾಗಿದೆ.

- ನು.ರೂ. - ಅಪ್ಪ ಎಲ್ಲಿ? (ಬಿ ೩)

  ತಿ.ರೂ. - ಅಪ್ಪ ಎಲ್ಲಿ ಹೋದರು

  (ಅಪ್ಪ) (ಎಲ್ಲಿ ಹೋದರು)

  ಅಪ್ಪ - ನಾ.ಗು.

  ಎಲ್ಲಿ ಹೋದರು - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಅಪ್ಪ' ಎನ್ನುವ ನಾಮಪದವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಎಲ್ಲಿ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿಯುವ ಮೂಲಕ ಸರಳ ಪ್ರಶ್ನಾರ್ಥಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಅದು ಏನು? (ಬಿ ೧)

  ತಿ.ರೂ. - ಅದು ಏನು ಆಗಿದೆ

  (ಅದು) (ಏನು ಆಗಿದೆ)

  ಅದು - ನಾ.ಗು.

  ಏನು ಆಗಿದೆ - ಕ್ರಿ.ಗು.

(ಸಂದರ್ಭ: ತನ್ನ ಆಂಟಿಯ ಕೈಯಲ್ಲಿರುವ ವಾಕ್‌ಮನ್ ಅನ್ನು ನೋಡಿ ಮಗು ಮೇಲಿನ ಪ್ರಶ್ನೆಯನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಅದು' ಎನ್ನುವ ಸರ್ವನಾಮವನ್ನು 'ಏನು' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ.

- ನು.ರೂ. - ಎಲ್ಲಿ ಓತಿಯಾ? (ಬಿ ೩)

  ತಿ.ರೂ. - ನೀನು ಎಲ್ಲಿಗೆ ಹೋಗುತ್ತಿಯಾ

  (ನೀನು) (ಎಲ್ಲಿಗೆ ಹೋಗುತ್ತಿಯಾ)

  ನೀನು - ನಾ.ಗು.

  ಎಲ್ಲಿಗೆ ಹೋಗುತ್ತಿಯಾ - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮ ಹೊರಗೆ ಹೊರಡಲು ಸಿದ್ಧವಾಗಿರುವುದನ್ನು ನೋಡಿ ಮೇಲಿನ ಪ್ರಶ್ನೆಯನ್ನು ಕೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಎಲ್ಲಿ' ಎನ್ನುವ ಪ್ರಶ್ನಾರ್ಥಕ ರೂಪವನ್ನು ಮತ್ತು 'ಹೋಗುತ್ತಿಯಾ' ಎನ್ನುವ ಕ್ರಿಯಾಪದವನ್ನು ನುಡಿದಿದೆ.

- ನು.ರೂ. - ಅಮ್ಮ ಊಟ ಆತಾ? (ಬಿ ೨)

  ತಿ.ರೂ. - ನಿನ್ನ ಊಟ ಆಯಿತೆ

  (ನಿನ್ನ ಊಟ) (ಆಯಿತೆ)

  ನಿನ್ನ ಊಟ - ನಾ.ಗು.

  ಆಯಿತೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ 'ಊಟ' ಎನ್ನುವ ನಾಮಪದವನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಆತಾ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ. ನಾಮಪದ ಗುಚ್ಚಕ್ಕೆ ಸೇರಿದ 'ನಿನ್ನ' ಎನ್ನುವ ಮಧ್ಯಮಪುರುಷ ಸರ್ವನಾಮವು ನುಡಿಯದಿದ್ದರೂ ಅದು ಮಗುವಿನ ಅಂತಸ್ಥದಲ್ಲಿ ಇರುತ್ತದೆ.

- ನು.ರೂ. - ನಿನದು ಚಾಕಲೇಟ್ ಐತ? (ಬಿ ೪)

  ತಿ.ರೂ. - ನಿನ್ನದು ಚಾಕಲೇಟ್ ಇದೆಯಾ

  (ನಿನ್ನದು) (ಚಾಕಲೇಟ್ ಇದೆಯಾ)

  ನಿನ್ನದು - ನಾ.ಗು.

  ಚಾಕಲೇಟ್ ಇದೆಯಾ - ಕ್ರಿ.ಗು.

(ಸಂದರ್ಭ: ಮಗು ತನ್ನ ಚಾಕಲೇಟ್ ಮುಗಿದ ತಕ್ಷಣ ನಿನ್ನದು ಇದೆಯಾ ಎಂದು ತನ್ನ ಅಕ್ಕನನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಚಕ್ಕೆ ಸೇರಿದ 'ನಿನದು' ಎನ್ನುವ ಮಧ್ಯಮಪುರುಷ ಸರ್ವನಾಮವನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ 'ಚಾಕಲೇಟ್' ಎನ್ನುವ ನಾಮಪದವನ್ನು ಮತ್ತು 'ಇದೆಯಾ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ. 'ಐತಾ' ಎನ್ನುವುದು ನಿರ್ದಿಷ್ಟ ಪ್ರದೇಶದ ಆಡುಭಾಷೆಯಾಗಿದೆ.

- ನು.ರೂ. - ಅಮ್ಮ ಜೀಜಿ ಮಮ್ಮುಂತ ನಮ್ಮ? ಜೀಜಿ ಬಲ್ಲ ತಿಂತಾನಮ್ಮ ?

  ಬಾಯಿಲಲ್ಲಮ್ಮ, ಕೈ ಇಲಲ್ಲಮ್ಮ, ಎಂಗ ತಿಂತನ ? (ಸಿ ೨)

  ತಿ.ರೂ. - ದೇವರು ಊಟ ಮಾಡುತ್ತಾನೋ ದೇವರು ಸಿಹಿ ತಿನ್ನುತ್ತಾನೋ ಆತನಿಗೆ ಬಾಯಿ ಇಲ್ಲವಲ್ಲ. ಆತನಿಗೆ ಕೈ ಇಲ್ಲವಲ್ಲ ಹೇಗೆ ತಿನ್ನುತ್ತಾನೆ?

  ೧. ದೇವರು ಊಟ ಮಾಡುತ್ತಾನೋ ?

  (ದೇವರು) (ಊಟ ಮಾಡುತ್ತಾನೋ)

  ದೇವರು - ನಾ.ಗು.

  ಊಟ ಮಾಡುತ್ತಾನೋ- ಕ್ರಿ.ಗು.

  ೨. ದೇವರು ಸಿಹಿ ತಿನ್ನುತ್ತಾನೋ ?

  (ದೇವರು) (ಸಿಹಿ ತಿನ್ನುತ್ತಾನೋ)

  ದೇವರು - ನಾ.ಗು.

  ಸಿಹಿ ತಿನ್ನುತ್ತಾನೋ - ಕ್ರಿ.ಗು.

  ೩. ಆತನಿಗೆ ಬಾಯಿ ಇಲ್ಲವಲ್ಲ ?

  (ಆತನಿಗೆ) (ಬಾಯಿ ಇಲ್ಲವಲ್ಲ)

  ಆತನಿಗೆ - ನಾ.ಗು.

  ಬಾಯಿ ಇಲ್ಲವಲ್ಲ - ಕ್ರಿ.ಗು.

೪. ಆತನಿಗೆ ಕೈ ಇಲ್ಲವಲ್ಲ ?

(ಆತನಿಗೆ) (ಕೈ ಇಲ್ಲವಲ್ಲ)

ಆತನಿಗೆ - ನಾ.ಗು.

ಕೈ ಇಲ್ಲವಲ್ಲ - ಕ್ರಿ.ಗು.

೫. ಆತನು ಹೇಗೆ ತಿನ್ನುತ್ತಾನೆ ?

(ಆತನು) (**ಹೇಗೆ ತಿನ್ನುತ್ತಾನೆ**)

ಆತನು - ನಾ.ಗು.

ಹೇಗೆ ತಿನ್ನುತ್ತಾನೆ - ಕ್ರಿ.ಗು.

(ಸಂದರ್ಭ: (ಜೀಜಿ-ದೇವರು, ಮಮ್ಮು-ಊಟ, ಬಲ್ಲ-ಸಿಹಿ) ಮಗು ತನ್ನ ಅಮ್ಮ ದೇವರಿಗೆ ನೈವೇದ್ಯ ಮಾಡಲು ಸಿಹಿ ಇಟ್ಟಾಗ ಮಗು ಮೇಲಿನ ಮಾತನ್ನು ತನ್ನ ಅಮ್ಮನಿಗೆ ಕೇಳುತ್ತದೆ.)

ಮಗುವಿನ ಅಭಿವ್ಯಕ್ತಿಯಲ್ಲಿ ಐದು ಪ್ರಶ್ನಾರ್ಥಕ ವಾಕ್ಯಗಳಿವೆ. 'ದೇವರು' ಎನ್ನುವ ಪದಕ್ಕೆ ಬದಲಾಗಿ ಮಗು ಶಿಶುಭಾಷೆಯ 'ಜೀಜಿ' ಎನ್ನುವ ರೂಪವನ್ನು ನುಡಿದಿದೆ. ನಂತರ 'ಆತನಿಗೆ' ಎನ್ನುವ ಸರ್ವನಾಮವನ್ನು ಬಳಸಿಲ್ಲವಾದರೂ ಅದು ಮಗುವಿನ ಅಂತಸ್ಥದಲ್ಲಿ ಇರುತ್ತದೆ.

- ನು.ರೂ. - ಅಮ್ಮ ಎದುಕ ಈವತ್ತು ಆಂಜನೇಯ ಸಾಮಿ ಗುಡಿಗೆ ಹೋಗಿಲ್ಲ (ಸಿ ೩)

  ತಿ.ರೂ. - ಇಂದು ನೀನು ಆಂಜನೇಯಸ್ವಾಮಿ ಗುಡಿಗೆ ಹೋಗಿಲ್ಲ ಏಕೆ

  (ಇಂದು ನೀನು) (**ಆಂಜನೇಯಸ್ವಾಮಿ ಗುಡಿಗೆ ಹೋಗಿಲ್ಲ ಏಕೆ**)

  ಇಂದು ನೀನು - ನಾ.ಗು.

  ಆಂಜನೇಯಸ್ವಾಮಿ ಗುಡಿಗೆ ಹೋಗಿಲ್ಲ ಏಕೆ - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಇಂದು' ಎನ್ನುವ ಪದವನ್ನು, ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಆಂಜನೇಯಸ್ವಾಮಿ' ಎನ್ನುವ ನಾಮಪದವನ್ನು ಮತ್ತು 'ಗುಡಿಗೆ' ಎನ್ನುವ ನಾಮಪದವನ್ನು, 'ಹೋಗಿಲ್ಲ' ಎನ್ನುವ ನಿಷೇಧ ರೂಪವನ್ನು, 'ಏಕೆ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ. ಮಗು ವಾಕ್ಯದ ಆರಂಭದಲ್ಲಿಯೇ 'ಏಕೆ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ. ಆಡುಭಾಷೆಯ ರೂಪದಲ್ಲಿ ಮಹತ್ವದ ಸಂಗತಿಯನ್ನು ಆರಂಭದಲ್ಲಿಯೇ ಅಭಿವ್ಯಕ್ತಿಸುವುದುಂಟು. ಭಾವನಾತ್ಮಕವಾಗಿ ಮಾತನಾಡುವಾಗ ಹೀಗೆ ಆಗುತ್ತದೆ. ಇದನ್ನು ವಯಸ್ಕರೂ ಕೂಡ ಮಾಡುತ್ತಾರೆ. ಇದು ಸಾಮಾನ್ಯ.

- ನು.ರೂ. - ಅಮ್ಮ ಡಾಕ್ಟರ್ ತಕ ಯಾವಾಗ್ ಹೋಗನ ? (ಡಿ ೯)

  ತಿ.ರೂ. - ನಾವು ಡಾಕ್ಟರ್ ಬಳಿ ಯಾವಾಗ ಹೋಗೋಣ

  (ನಾವು) (**ಡಾಕ್ಟರ್ ಬಳಿ ಯಾವಾಗ ಹೋಗೋಣ**)

  ನಾವು - ನಾ.ಗು.

  ಡಾಕ್ಟರ್ ಬಳಿ ಯಾವಾಗ ಹೋಗೋಣ - ಕ್ರಿ.ಗು.

(ಸಂದರ್ಭ: ಮಗುವಿನ ತಾಯಿ ಮಗುವಿಗೆ ಡಾಕ್ಟರ್ ಬಳಿ ಹೋಗೋಣ ಎಂದು ಹೇಳಿದ್ದರು. ಕಾರಣ ಮಗು ತನ್ನ ಅಮ್ಮನನ್ನು ಯಾವಾಗ ಹೋಗೋಣ ಎಂದು ಮೇಲಿನ ರೀತಿ ಕೇಳುತ್ತದೆ.)

ಮಗು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಡಾಕ್ಟರ್' ಎನ್ನುವ ನಾಮಪದವನ್ನು, 'ಯಾವಾಗ' ಎನ್ನುವ ಪ್ರಶ್ನಾರ್ಥಕ

ರೂಪವನ್ನು 'ಹೋಗೋಣ' ಎನ್ನುವ ಕ್ರಿಯಾಪದವನ್ನು ನುಡಿದಿದೆ. ನಾಮಪದ ಗುಚ್ಛಕ್ಕೆ ಸೇರಿದ 'ನಾವು' ಎನ್ನುವ ಪದವನ್ನು ನುಡಿಯದಿದ್ದರೂ ಅದು ಮಗುವಿನ ಅಂತಸ್ಥದಲ್ಲಿರುತ್ತದೆ.

- ನು.ರೂ. - ಆ ಟಾಕಿಟ್ರಿ ಎಲ್ಲಿಗೋತತವ್ವ (ಸಿ ೩)
  ತಿ.ರೂ. - ಆ ಟ್ಯಾಕ್ಟರ್ ಎಲ್ಲಿಗೆ ಹೋಗುತ್ತೆ
  (ಆ ಟ್ಯಾಕ್ಟರ್) (ಎಲ್ಲಿಗೆ ಹೋಗುತ್ತೆ)
  ಆ ಟ್ಯಾಕ್ಟರ್ - ನಾ.ಗು.
  ಎಲ್ಲಿಗೆ ಹೋಗುತ್ತೆ - ಕ್ರಿ.ಗು.

(ಸಂದರ್ಭ: ರಸ್ತೆಯಲ್ಲಿ ಹೋಗುತ್ತಿರುವ ಟ್ಯಾಕ್ಟರನ್ನು ನೋಡಿ ಮಗು ತನ್ನ ಅಜ್ಜಿಗೆ ಮೇಲಿನ ವಾಕ್ಯವನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಆ' ಎನ್ನುವ ನಿರ್ದೇಶಾತ್ಮಕ ಸರ್ವನಾಮವನ್ನು ಮತ್ತು 'ಟ್ಯಾಕ್ಟರ್' ಎನ್ನುವ ನಾಮಪದವನ್ನು ಹಾಗೂ ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಎಲ್ಲಿಗೆ' ಎನ್ನುವ ಪ್ರಶ್ನಾರ್ಥಕ ರೂಪವನ್ನು 'ಹೋಗುತ್ತೆ' ಎನ್ನುವ ಕ್ರಿಯಾಪದವನ್ನು ನುಡಿಯುವ ಮೂಲಕ ವಾಕ್ಯವನ್ನು ಪ್ರತಿನಿಧಿಸಿದೆ. ಇಲ್ಲಿ ನುಡಿದ ರೂಪವು ತಿಳಿದ ರೂಪಕ್ಕೆ ತಕ್ಕಂತೆ ನಿಯಮಬದ್ಧವಾಗಿದೆ.

- ನು.ರೂ. - ಕುರಿಗಳು ಕಕ್ಕ ಮೊಡಿದ್ರೆ ಯಾಕೆ ಉಂಡೆ ಉಂಡೆಯಾಗಿರುತ್ತೆ (ಜಿ ೨)
  ತಿ.ರೂ. - ಕುರಿಗಳು ಕಕ್ಕ ಮಾಡುತ್ತವೆ. ಅದು ಉಂಡೆ ಉಂಡೆಯಾಗಿ ಇರುತ್ತೆ ಅದು ಯಾಕೆ.

೧. ಕುರಿಗಳು ಕಕ್ಕ ಮಾಡುತ್ತವೆ
(ಕುರಿಗಳು) (ಕಕ್ಕ ಮಾಡುತ್ತವೆ)
ಕುರಿಗಳು - ನಾ.ಗು.
ಕಕ್ಕ ಮಾಡುತ್ತವೆ - ಕ್ರಿ.ಗು.

೨. ಅದು ಉಂಡೆ ಉಂಡೆಯಾಗಿ ಇರುತ್ತೆ
(ಅದು) (ಉಂಡೆ ಉಂಡೆಯಾಗಿ ಇರುತ್ತೆ)
ಅದು - ನಾ.ಗು.
ಉಂಡೆ ಉಂಡೆಯಾಗಿ ಇರುತ್ತೆ - ಕ್ರಿ.ಗು.

೩. ಅದು ಯಾಕೆ ?
(ಅದು) (ಯಾಕೆ)
ಅದು - ನಾ.ಗು.
ಯಾಕೆ - ಕ್ರಿ.ಗು.

(ಸಂದರ್ಭ: ಮಗು ಕುರಿಗಳು ಕಕ್ಕ ಮಾಡುತ್ತಿರುವುದನ್ನು ನೋಡಿ ತನ್ನ ಅಮ್ಮನನ್ನು ಕೇಳುತ್ತದೆ. )

ಮೇಲಿನ ಅಭಿವ್ಯಕ್ತಿಯು ಮೂರು ವಾಕ್ಯಗಳನ್ನು ಒಳಗೊಂಡ ಸಂಕೀರ್ಣ ವಾಕ್ಯವಾಗಿದೆ. 'ಕುರಿಗಳು ಕಕ್ಕ ಮಾಡುತ್ತವೆ' ಎನ್ನುವಲ್ಲಿ ಮಗು ನಾಮಪದ ಗುಚ್ಛಕ್ಕೆ ಸೇರಿದ 'ಕುರಿಗಳು' ಎನ್ನುವ ನಾಮಪದದ ಬಹುವಚನ ರೂಪವನ್ನು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಕಕ್ಕ' ಎನ್ನುವ ನಾಮಪದವನ್ನು ಮತ್ತು 'ಮಾಡಿದ್ರೆ' ಎನ್ನುವ ಅಪರಿಪೂರ್ಣ ಕ್ರಿಯಾಪದವನ್ನು ನುಡಿದಿದೆ. 'ಅದು ಉಂಡೆಉಂಡೆಯಾಗಿ ಇರುತ್ತದೆ' ಎನ್ನುವಲ್ಲಿ ವಸ್ತುವಿನ ಗುಣವನ್ನು ಅದರ ಇರುವಿಕೆಯನ್ನು ಸೂಚಿಸುತ್ತದೆ. 'ಅದು ಯಾಕೆ' ಎನ್ನುವಲ್ಲಿ ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಯಾಕೆ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ. ಈ ಮೂಲಕ ಒಂದು ಸಂಕೀರ್ಣ ಪ್ರಶ್ನಾರ್ಥಕ ವಾಕ್ಯವನ್ನು ಅಭಿವ್ಯಕ್ತಿಗೊಳಿಸಿದೆ.

- ನು.ರೂ. - ಹಾವು ಏಕೆ ಅಷ್ಟು ಉದ್ದ ಇರುತ್ತೆ (ಎಫ್ ೧)
  ತಿ.ರೂ. - ಹಾವು ಅಷ್ಟು ಉದ್ದ ಇರುತ್ತೆ. ಏಕೆ?

೧. ಹಾವು ಅಷ್ಟು ಉದ್ದ ಇರುತ್ತೆ
**(ಹಾವು) (ಅಷ್ಟು ಉದ್ದ ಇರುತ್ತೆ)**

ಹಾವು - ನಾ.ಗು.
ಅಷ್ಟು ಉದ್ದ ಇರುತ್ತೆ - ಕ್ರಿ.ಗು.

೨. ಅದು ಯಾಕೆ?
**(ಅದು) (ಯಾಕೆ)**

ಅದು - ನಾ.ಗು.
ಯಾಕೆ - ಕ್ರಿ.ಗು.

(ಸಂದರ್ಭ: ಟಿ.ವಿ.ಯಲ್ಲಿ ಹಾವನ್ನು ನೋಡಿದ ಮಗು ಮೇಲಿನ ವಾಕ್ಯವನ್ನು ಕೇಳುತ್ತದೆ.)

ಮಗು ನಾಮಪದ ಗುಚ್ಛಕ್ಕೆ ಸೇರಿದ 'ಹಾವು' ಎನ್ನುವ ನಾಮಪದವನ್ನು 'ಅಷ್ಟು ಉದ್ದ ಇರುತ್ತೆ' ಎನ್ನುವ ಕ್ರಿಯಾಪದ ಗುಚ್ಛವನ್ನು ಮತ್ತು 'ಏಕೆ' ಎನ್ನುವ ಪ್ರಶ್ನಾರ್ಥಕ ರೂಪವನ್ನು ನುಡಿದಿದೆ.

- ನು.ರೂ. - ಕಳ್ಡ್ರು ನಮ್ ಮನೆಗೆ ಬಂದರೆ ನಾವು ಏನ್ ಮಾಡಣ (ಹೆಚ್ ೨)
  ತಿ.ರೂ. - ಕಳ್ಳರು ನಮ್ಮ ಮನೆಗೆ ಬಂದರೆ ನಾವು ಏನು ಮಾಡೋಣ

೧. ಕಳ್ಳರು ನಮ್ಮ ಮನೆಗೆ ಬರುತ್ತಾರೆ
**(ಕಳ್ಳರು) ((ನಮ್ಮ ಮನೆಗೆ) ಬರುತ್ತಾರೆ)**

ಕಳ್ಳರು - ನಾ.ಗು.
ನಮ್ಮ ಮನೆಗೆ ಬರುತ್ತಾರೆ - ಕ್ರಿ.ಗು.

೨. ನಾವು ಏನು ಮಾಡೋಣ
**(ನಾವು) (ಏನು ಮಾಡೋಣ)**

ನಾವು - ನಾ.ಗು.
ಏನು ಮಾಡೋಣ - ಕ್ರಿ.ಗು.

(ಸಂದರ್ಭ: ಮಗು ತನ್ನ ಅಮ್ಮನ ಬಳಿ ಈ ಮಾತನ್ನು ಕೇಳುತ್ತದೆ.)

ಮೇಲಿನ ಅಭಿವ್ಯಕ್ತಿಯಲ್ಲಿ ಎರಡು ವಾಕ್ಯಗಳನ್ನು ಕಾಣಬಹುದು. 'ಕಳ್ಳರು ನಮ್ಮ ಮನೆಗೆ ಬರುತ್ತಾರೆ' ಎನ್ನುವಲ್ಲಿ ನಾಮಪದ ಗುಚ್ಛಕ್ಕೆ ಸೇರಿದ 'ಕಳ್ಳರು' ಎನ್ನುವ ನಾಮಪದವನ್ನು, ಕ್ರಿಯಾಪದ ಗುಚ್ಛಕ್ಕೆ ಸೇರಿದ 'ನಮ್ಮ ಮನೆಗೆ' ಎನ್ನುವ ನಾಮ ಗುಚ್ಛವನ್ನು, 'ಬರುತ್ತಾರೆ' ಎನ್ನುವ ಕ್ರಿಯಾರೂಪವನ್ನು ನುಡಿದಿದೆ. 'ನಾವು ಏನು ಮಾಡೋಣ' ಎನ್ನುವಲ್ಲಿ ನಾಮಪದ ಗುಚ್ಛಕ್ಕೆ ಸೇರಿದ 'ನಾವು' ಎನ್ನುವ ಉತ್ತಮ ಪುರುಷ ಬಹುವಚನ ರೂಪದ ಸರ್ವನಾಮವನ್ನು ಮತ್ತು ಕ್ರಿಯಾಪದ ಗುಚ್ಛಕ್ಕೆ ಸೇರಿದ 'ಏನು' ಎನ್ನುವ ಪ್ರಶ್ನಾರ್ಥಕ ರೂಪವನ್ನು, 'ಮಾಡೋಣ' ಎನ್ನುವ ಕ್ರಿಯಾಪದವನ್ನು ನುಡಿದಿದೆ.

ಸಾರಾಂಶ:

- ಮಕ್ಕಳು ಪ್ರಶ್ನಾರ್ಥಕ ರೂಪಗಳನ್ನು ಪಡೆದುಕೊಳ್ಳುವಾಗಲೇ ಪೂರ್ಣ ರೂಪಗಳನ್ನು ಪಡೆದುಕೊಂಡಿರುತ್ತಾರೆ. ಆದರೆ ಅದನ್ನು ಎರಡು ಪದದ ಹಂತದಲ್ಲಿ ಅಂದರೆ ಒಂದು ವರ್ಷ ಏಳು ಮತ್ತು ಎಂಟು ತಿಂಗಳ ವಯೋಮಾನದಲ್ಲಿ ನುಡಿಯುವ ಮೂಲಕ ಅಭಿವ್ಯಕ್ತಿಗೊಳಿಸುತ್ತಾರೆ.
- ಪ್ರಶ್ನಾರ್ಥಕ ಪದಗಳಾದ ಏನು, ಯಾವಾಗ, ಎಲ್ಲಿ, ಏಕೆ ಎನ್ನುವ ರೂಪಗಳನ್ನು ಸಾಮಾನ್ಯವಾಗಿ ಒಂದು ವರ್ಷ ಏಳು ತಿಂಗಳ ವಯೋಮಾನದಲ್ಲಿ ನುಡಿಯುವ ಮೂಲಕ ಅಭಿವ್ಯಕ್ತಿಗೊಳಿಸುತ್ತಾರೆ. ಮತ್ತು ಖಚಿತಪಡಿಸಿಕೊಳ್ಳಲು ಕೇಳುವ ಪ್ರಶ್ನಾರ್ಥಕ ವಾಕ್ಯಗಳನ್ನು ಎರಡು ವರ್ಷ ಮತ್ತು ನಂತರದ ವಯೋಮಾನದಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ.
- ಮಕ್ಕಳು ಯಾವುದೇ ಹಂತದಲ್ಲಿ ಪ್ರಶ್ನಾರ್ಥಕ ರೂಪಗಳನ್ನು ನುಡಿದರೂ ಪಡೆದುಕೊಳ್ಳುವಾಗ ಪೂರ್ಣ ರೂಪದಲ್ಲೇ ಪಡೆದುಕೊಳ್ಳುತ್ತಾರೆ. ಅದನ್ನು ಬಳಸುವಲ್ಲಿಯೂ ಅಂತಸ್ಥ ವಾಕ್ಯಗಳ ನಿಯಮಕ್ಕೆ ಅನುಗುಣವಾಗಿ ನಿಯಮಬದ್ಧವಾಗಿರುತ್ತವೆ.

ಅಧ್ಯಾಯ-೯

# ಸಮಾರೋಪ

ಈ ಸಂಶೋಧನಾ ನಿಬಂಧದಲ್ಲಿ ನೇಟಿವಿಸ್ಟ್‌ಗಳ ಸಿದ್ಧಾಂತವನ್ನು ಆಧಾರ ಸಿದ್ಧಾಂತವನ್ನಾಗಿ ಇರಿಸಿಕೊಳ್ಳಲಾಗಿತ್ತು. ಈ ಪ್ರಕಾರ ಜನ್ಮಜಾತವಾದ ಭಾಷಾ ಸಾಮರ್ಥ್ಯವನ್ನು (ಯು.ಜಿ.) ವೈಶ್ವಿಕ ವ್ಯಾಕರಣ ಎಂದು ಕಲ್ಪಿಸಿಕೊಳ್ಳಲಾಗಿರುತ್ತದೆ. ಇದು ಯಾವುದೇ ಒಂದು ನಿರ್ದಿಷ್ಟ ಭಾಷೆಯನ್ನು ಪ್ರತಿನಿಧಿಸುವುದಿಲ್ಲ. ವಿಶ್ವದ ಯಾವುದೇ ಮಾನವ ಸಹಜ ಭಾಷೆಯನ್ನಾದರೂ ಪ್ರತಿನಿಧಿಸಬಲ್ಲ ಸಾಮಾನ್ಯ ತಳಹದಿಯಾಗಿರುತ್ತದೆ. ವಿಶ್ವದ ಮಾನವ ಶಿಶುಗಳಲ್ಲಿ ಭಾಷೆಯನ್ನು ಪಡೆದುಕೊಳ್ಳುವ ಮೂಲ ದ್ರವ್ಯವಾಗಿರುತ್ತದೆ. ಯಾವುದೇ ಭಾಷೆಯಾಗಿ ಪರಿವರ್ತಿತವಾಗಬಲ್ಲ ಮೂಲವಸ್ತು. ಮಕ್ಕಳು ಇದನ್ನು ಪಡೆದುಕೊಂಡೇ ಹುಟ್ಟಿರುತ್ತಾರೆ. ಇದಕ್ಕೆ ನೆರವಾಗಲು ಮಕ್ಕಳಲ್ಲಿ ಲ್ಯಾಡ್ (ಎಲ್.ಎ.ಡಿ.-ಲ್ಯಾಂಗ್ವೇಜ್ ಅಕ್ವೈರಿಂಗ್ ಡಿವೈಸ್) ಭಾಷಾ ಗಳಿಕೆಯ ಸಾಧನ ಇರುತ್ತದೆ. ಈ ಮೂಲಕ ಮಕ್ಕಳು ತಾವು ಹುಟ್ಟಿದ ಮತ್ತು ಪರಿಸರದಲ್ಲಿ ಕೇಳಿಸಿಕೊಂಡ ಭಾಷೆಯ ನಿಯಮಗಳನ್ನು ಪಡೆದುಕೊಳ್ಳುತ್ತಾರೆ. ಇದು ಕನ್ನಡ ಮಕ್ಕಳ ಸಂದರ್ಭದಲ್ಲಿಯೂ ಅಧ್ಯಯನದ ಮೂಲಕ ಖಚಿತವಾಗಿದೆ. ಇದನ್ನು ವಾಕ್ಯರಚನೆಯ ಮೂಲಕ ಮಂಡಿಸಲಾಗಿದೆ.

* ವಾಕ್ಯದಲ್ಲಿ ನಾಮಪದ ಪುಂಜ, ಕ್ರಿಯಾಪದ ಪುಂಜವಿದ್ದು, ಮಕ್ಕಳು ಕನ್ನಡಭಾಷಾ ಗಳಿಕೆಯ ಸಂದರ್ಭದಲ್ಲಿ ಪದಪುಂಜಗಳನ್ನು ನಿಯಮಬದ್ಧವಾಗಿ ಜೋಡಿಸುವ ಕ್ರಮ.
* ನಿಯಮಗಳನ್ನು ಪಡೆದು ಅಭಿವ್ಯಕ್ತಿಗೊಳಿಸುವ ಕ್ರಮ.
* ಅಂತಸ್ಥ ನಿಯಮಕ್ಕೆ ಅನುಗುಣವಾಗಿ ಬಳಕೆ ನಿಯಮದಲ್ಲಿ ಇರುವ ಕ್ರಮಬದ್ಧತೆ

ಈ ಎಲ್ಲಾ ಅಂಶಗಳನ್ನು ಈ ನಿಬಂಧವು ಒಳಗೊಂಡಿದೆ.

**ಅಧ್ಯಯನದ ಫಲಿತಗಳು**

* ಸಾಮಾನ್ಯವಾಗಿ ಮಕ್ಕಳು ಒಂದು ವರ್ಷ ನಾಲ್ಕು ತಿಂಗಳುಗಳ ವಯೋಮಾನದಲ್ಲಿ ಪದಗಳ ಮೂಲಕ ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವನ್ನು ಪಡೆದಿರುತ್ತಾರೆ. ಈ ಪದಗಳು ಹೆಚ್ಚಾಗಿ ನಾಮಪದಗಳೇ ಆಗಿರುತ್ತವೆ. ಈ ನಾಮಪದಗಳು ಕೂಡ ಸಂಬಂಧವನ್ನು ಸೂಚಿಸುವ ಅಮ್ಮ, ಅಪ್ಪ, ಅಣ್ಣ, ಅಕ್ಕ, ಆಂಟಿ ಮುಂತಾದ ಸಂಬೋಧನಾ ರೂಪಗಳಾಗಿರುತ್ತವೆ.
* ಮಕ್ಕಳು ಸುಮಾರು ಒಂದೂವರೆ ವರ್ಷ ಅಥವಾ ಹದಿನೆಂಟು ತಿಂಗಳುಗಳ ವಯೋಮಾನದಲ್ಲಿ ತಾವು ಗ್ರಹಿಸಿದ್ದನ್ನು ಪದಗಳ ಮೂಲಕ ಅಭಿವ್ಯಕ್ತಿಗೊಳಿಸುವ ಸಾಮರ್ಥ್ಯವನ್ನು ಪಡೆದುಕೊಳ್ಳುತ್ತಾರೆ. ಅಲ್ಲದೆ, ಪದಗಳ ನಡುವಿನ ನಿಯಮಬದ್ಧತೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ಹಾಗಾಗಿ ಈ ವಯೋಮಾನವನ್ನು ರಚನಾ ಕೌಶಲ್ಯಗಳನ್ನು ಅಭಿವ್ಯಕ್ತಿಗೊಳಿಸುವ ಆರಂಭಿಕ ಹಂತ ಎಂದು ಕರೆಯಬಹುದಾಗಿದೆ. ಈ ಅವಧಿಯಲ್ಲಿ ಮಕ್ಕಳು ನೂರಕ್ಕೂ ಹೆಚ್ಚು ಪದಗಳನ್ನು ಅಭಿವ್ಯಕ್ತಿಗೊಳಿಸುತ್ತಾರೆ. ಈ ಪದಗಳು ಕೂಡ ಹೆಚ್ಚಾಗಿ ನಾಮಪದ, ಸರ್ವನಾಮ, ಕ್ರಿಯಾಪದಗಳನ್ನೊಳಗೊಂಡ ಪದಗಳಾಗಿರುತ್ತವೆ.
* ಮಕ್ಕಳು ಒಂದು ಪದವನ್ನು ನುಡಿಯುವ ಸಂದರ್ಭದಲ್ಲಿನ ನಾಮಪದ, ಸರ್ವನಾಮ ಮತ್ತು ಕ್ರಿಯಾಧಾತುಗಳನ್ನೊಳಗೊಂಡ ಎಲ್ಲಾ ನಿದರ್ಶನಗಳೂ ಕ್ರಿಯಾಪದ ಗುಚ್ಛಕ್ಕೆ ಸೇರಿದ ಪದಗಳಾಗಿರುತ್ತವೆ.
* ಮಕ್ಕಳು ಒಂದು ಪದವನ್ನು ನುಡಿಯುವ ಹಂತದಲ್ಲಿ ಕ್ರಿಯಾಧಾತುಗಳನ್ನು ನುಡಿಯುತ್ತಾರೆ. ಈ ಧಾತುಗಳು ವಿಧ್ಯರ್ಥಕ ರೂಪಗಳಾಗಿ ಬಳಕೆಯಾಗುತ್ತವೆ. ಧಾತುಗಳ ವಿಧ್ಯರ್ಥಕ ರೂಪಗಳನ್ನು ಸಂದರ್ಭಾನುಸಾರವಾಗಿ ವಯಸ್ಕರು ಬಳಸುತ್ತಾರೆ. ಇದು ಕನ್ನಡ ಭಾಷೆಯು ರೂಢಿಸಿಕೊಂಡಿರುವ ನಿಯಮ.
* ಮಕ್ಕಳು ಎರಡು ಪದಗಳನ್ನು ನುಡಿಯುವ ಸಂದರ್ಭದಲ್ಲಿ, ವಾಕ್ಯದಲ್ಲಿನ ಕ್ರಿಯಾಪದ ಗುಚ್ಛಕ್ಕೆ ಸೇರಿದ ಎರಡು

ಪದಗಳನ್ನು ನುಡಿಯುತ್ತಾರೆ. ಅಲ್ಲದೆ, ನಾಮಪದ ಗುಚ್ಚಕ್ಕೆ ಸೇರಿದ ಪದವನ್ನು ಕ್ರಿಯಾಪದ ಗುಚ್ಚಕ್ಕೆ ಸೇರಿದ ಪದವೊಂದನ್ನು ನುಡಿಯುತ್ತಾರೆ. ಎರಡು ರೀತಿಯ ವಿಧಾನಗಳು ಕಂಡುಬರುತ್ತವೆ. ಈ ಮೂಲಕ ವಾಕ್ಯವನ್ನು ಪ್ರತಿನಿಧಿಸುತ್ತಾರೆ. ಎರಡು ಪದಗಳ ಹಂತದಲ್ಲೇ ಕ್ರಿಯಾಪದ ಗುಚ್ಚಕ್ಕೆ ಸೇರಿದ ಪದವನ್ನು ನುಡಿಯುವುದರೊಂದಿಗೆ ನಾಮಪದ ಗುಚ್ಚಕ್ಕೆ ಸೇರಿದ ಪದವನ್ನು ನುಡಿಯುವ ಸಾಮರ್ಥ್ಯವನ್ನು ಅಭಿವ್ಯಕ್ತಿಯ ನೆಲೆಯಲ್ಲಿ ಪಡೆದುಕೊಂಡಿರುತ್ತಾರೆ.

* ಮಕ್ಕಳು ಎರಡು ಪದಗಳನ್ನು ನುಡಿಯುವ ಹಂತದಲ್ಲಿ ವಿಶೇಷಣ ಮತ್ತು ವಿಶೇಷ್ಯಗಳನ್ನು ಕ್ರಮಬದ್ಧವಾಗಿ ನುಡಿಯುತ್ತಾರೆ. ವಾಕ್ಯದಲ್ಲಿ ನಾಮವಿಶೇಷಣವು ನಾಮಪದದ ಹಿಂದೆ ಬರಬೇಕು ಎಂಬುದು ಕನ್ನಡ ಭಾಷೆಯ ನಿಯಮ. ಇದನ್ನು ಮಕ್ಕಳು ನಿಯಮಬದ್ಧವಾಗಿ ಪಾಲಿಸುತ್ತಾರೆ.

* ಮಕ್ಕಳು ಕ್ರಿಯಾ ವಿಶೇಷಣವನ್ನು ಎರಡು ವರ್ಷ ನಾಲ್ಕು ತಿಂಗಳುಗಳಿಂದ ಎರಡು ವರ್ಷ ಆರು ತಿಂಗಳ ವಯೋಮಾನದಲ್ಲಿ ಪಡೆಯುವುದರ ಮೂಲಕ ಅಭಿವ್ಯಕ್ತಿಗೊಳಿಸುತ್ತಾರೆ.

* ಮಕ್ಕಳು ಕ್ರಿಯಾಧಾತುಗಳನ್ನು ಮೊದಲು ಉಚ್ಚರಿಸಿ ನಂತರ ಕಾಲಸೂಚಕ ಪ್ರತ್ಯಯಗಳನ್ನು, ಆಖ್ಯಾತಗಳನ್ನು ಉಚ್ಚರಿಸುವುದಿಲ್ಲ. ಅಂದರೆ ಧಾತುಗಳಾದ 'ಬೀಳು, ಬರು, ನೋಡು, ಮಾಡು' ಮುಂತಾದ ಯಾವುದೇ ಧಾತುಗಳನ್ನಾಗಲಿ ಮತ್ತು "ದ", "ಉತ್", "ಉವ" ಎನ್ನುವ ಭೂತ ಮತ್ತು ಅಭೂತ ಕಾಲಸೂಚಕ ಪ್ರತ್ಯಯಗಳನ್ನಾಗಲಿ ಹಾಗೂ ಅಖ್ಯಾತ ಪ್ರತ್ಯಯಗಳನ್ನು ಸ್ವತಂತ್ರವಾಗಿ ಬಿಡಿಬಿಡಿಯಾಗಿ ನುಡಿಯದೆ, ಕ್ರಿಯಾಪದಗಳನ್ನು ನುಡಿಯುವಾಗಲೇ ಪೂರ್ಣ ರೂಪದಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ.

* ಸುಮಾರು ಒಂದೂವರೆಯಿಂದ ಎರಡು ವರ್ಷದವರೆಗಿನ ಮಕ್ಕಳ ಕಾಲಸೂಚಕ ಕ್ರಿಯಾಪದಗಳಲ್ಲಿ ಧಾತು ಕಾಲಸೂಚಕ ಪ್ರತ್ಯಯ ಮತ್ತು ಅಖ್ಯಾತ ಪ್ರತ್ಯಯಗಳನ್ನು ಬಿಡಿಸಿ ತೋರಿಸುವಷ್ಟು ಸ್ಪಷ್ಟವಾದ ಉಚ್ಚಾರಣೆಯನ್ನು ಕಾಣದಿದ್ದರೂ ಕ್ರಿಯಾಪದಗಳು ಆ ಮೂರನ್ನೂ ಒಳಗೊಂಡ ಪೂರ್ಣ ಕ್ರಿಯಾಪದಗಳನ್ನು ಹೋಲುವ ಪದಗಳಾಗಿರುತ್ತವೆ. ಎರಡು ವರ್ಷದ ನಂತರದ ಮಕ್ಕಳಲ್ಲಿ ಅವುಗಳನ್ನು ಸ್ಪಷ್ಟವಾದ ಉಚ್ಚಾರಣೆಯಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ.

* ಕಾಲಸೂಚಕ ಕ್ರಿಯಾಪದಗಳನ್ನು ಅಭಿವ್ಯಕ್ತಿಗೊಳಿಸುವಲ್ಲಿ ಕೆಲವು ವೇಳೆ ಮಕ್ಕಳಿಂದ ಮಕ್ಕಳಿಗೆ ವಯೋಮಾನದ ಅಂತರವನ್ನು ಕಾಣಬಹುದಾದರೂ ಸಾಮಾನ್ಯವಾಗಿ ಒಂದು ವರ್ಷ ಹತ್ತು ತಿಂಗಳಿನಿಂದ ಎರಡು ವರ್ಷ ನಾಲ್ಕು ತಿಂಗಳ ಅಂತರದಲ್ಲಿ ಅವುಗಳನ್ನು ಗ್ರಹಿಕೆಯ ಮೂಲಕ ಅಭಿವ್ಯಕ್ತಿಗೊಳಿಸುವುದನ್ನು ಕಾಣಬಹುದು. ಆದರೆ ಯಾವುದೇ ಹಂತದಲ್ಲಿ ಅಭಿವ್ಯಕ್ತಿಗೊಳಿಸಿದರೂ ಧಾತು, ಕಾಲಸೂಚಕ ಮತ್ತು ಅಖ್ಯಾತ ಪ್ರತ್ಯಯಗಳನ್ನು ಸ್ವತಂತ್ರವಾಗಿ ಬಿಡಿಬಿಡಿಯಾಗಿ ಪಡೆದು ನುಡಿಯುವುದಿಲ್ಲ. ಪಡೆದುಕೊಳ್ಳುವಾಗಲೇ ಪೂರ್ಣ ರೂಪದಲ್ಲಿ ಪಡೆದುಕೊಂಡು ಅಭಿವ್ಯಕ್ತಿಗೊಳಿಸುತ್ತಾರೆ.

* ಅಪರಿಪೂರ್ಣ ಕ್ರಿಯಾಪದವನ್ನು ಬಳಸಿಕೊಂಡು ಸಂಕೀರ್ಣ ವಾಕ್ಯವನ್ನು ಮಾಡುವುದು ಕನ್ನಡ ಭಾಷೆಯ ನಿಯಮ. ಎರಡೂವರೆ ವರ್ಷ ವಯೋಮಾನದ ಮಕ್ಕಳಲ್ಲಿ ಇದನ್ನು ಕಾಣಬಹುದು.

* ಮಕ್ಕಳು ಒಂದು ವರ್ಷ ಎಂಟು ತಿಂಗಳ ವಯೋಮಾನದ ವೇಳೆಗೆ "ಇಲ್ಲ, ಅಲ್ಲ, ಬೇಡ" ಎನ್ನುವ ನಿಷೇಧ ರೂಪಗಳನ್ನು ಸಂದರ್ಭಾನುಸಾರವಾಗಿ ನುಡಿಯುವ ಮೂಲಕ ಅಭಿವ್ಯಕ್ತಿಗೊಳಿಸುತ್ತಾರೆ.

* ಸಾಮಾನ್ಯವಾಗಿ ಒಂದು ಪದದ ಹಂತದಲ್ಲೇ ನಿಷೇಧ ರೂಪಗಳನ್ನು ಕಾಣಬಹುದಾದರೂ ಎರಡು ಮತ್ತು ಎರಡಕ್ಕಿಂತ ಹೆಚ್ಚಿನ ಪದಗಳನ್ನು ನುಡಿಯುವ ಹಂತದಲ್ಲಿನ ನಿಷೇಧ ರೂಪಗಳ ಬಳಕೆಯು ರಚನಾ ಕೌಶಲ್ಯಗಳನ್ನು ಗುರುತಿಸುವಷ್ಟು ನಿರ್ದಿಷ್ಟವಾಗಿರುತ್ತವೆ.

* ಮಕ್ಕಳು ಇತರ ವಾಕ್ಯಗಳನ್ನು ಪಡೆದುಕೊಳ್ಳುವಾಗಲೇ ನಿಷೇಧ ರೂಪಗಳನ್ನು ಪಡೆದುಕೊಂಡಿರುತ್ತಾರೆ. ವಾಕ್ಯದಲ್ಲಿ ಅವುಗಳನ್ನು ಅಭಿವ್ಯಕ್ತಿಗೊಳಿಸುವಾಗಲೂ ನಿಯಮಬದ್ಧತೆಯನ್ನು ಅನುಸರಿಸುತ್ತಾರೆ. ಅಂದರೆ ನಿಷೇಧ ರೂಪಗಳ ಮತ್ತು ಅವುಗಳ ರಚನೆಗೆ ಸಂಬಂಧಿಸಿದ ನಿಯಮಗಳನ್ನು ಭಾಷಾಗಳಿಕೆಯ ಆರಂಭದ ಹಂತದಲ್ಲೇ ಪಡೆದಿರುತ್ತಾರೆ.

